KA / BG-GPO / 2515 / WPP-47 / 2009-2011



# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**



| ಸಂಪುಟ ೧೪೪ | ಬೆಂಗಳೂರು, ಗುರುವಾರ, ಮಾರ್ಚ್ ೨೬, ೨೦೦೯ (ಚೈತ್ರ ೫, ಶಕ ವರ್ಷ ೧೯೩೦) | ಸಂಚಿಕೆ ೧೩ |
|---|---|---|



## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

**ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ**

**ವಿಷಯ :** ವಿವಿಧ ವರ್ಗಗಳ ಮಾರಾಟಗಾರರ ನಮೂದಿತ ಪಟ್ಟಿಯ ಕುರಿತು.

**ಓದಲಾಗಿದೆ:** ದಿನಾಂಕ 9–1–2007ರ ಸರ್ಕಾರದ ಆದೇಶ ಸಿಆಸುಇ 7 ವಿಮಾಅ 2006.

**ಪ್ರಸ್ತಾವನೆ :**

ರಾಜ್ಯದಲ್ಲಿರುವ ವಿವಿಧ ಸರ್ಕಾರಿ ಕಛೇರಿಗಳಲ್ಲಿ ಗಣಕೀಕರಣಕ್ಕಾಗಿ ಅವಶ್ಯವಿರುವ ಗಣಕ ಯಂತ್ರಗಳು, ಪ್ರಿಂಟರ್‌ಗಳು, ಅವುಗಳ ಪೂರಕ ಸಾಧನಗಳು, ವಿವಿಧ ತಂತ್ರಾಂಶಗಳು, ತಂತ್ರಾಂಶ ಸಿದ್ದಪಡಿಸುವ, ನೆಟ್ ವರ್ಕಿಂಗ್, ಯು.ಪಿ.ಎಸ್., ತರಬೇತಿ, ವೆಬ್ ಡಿಸೈನಿಂಗ್, ಡೇಟಾ ಎಂಟ್ರಿ ಹಾಗೂ ವಾರ್ಷಿಕ ನಿರ್ವಹಣೆ ಮುಂತಾದ ಸಾಮಗ್ರಿ/ಸೇವೆಗಳನ್ನು ಪೂರೈಸುವುದಕ್ಕಾಗಿ ನಾನಾ ಸಂಸ್ಥೆಗಳನ್ನು ಸಂಕ್ಷಿಪ್ತಗೊಳಿಸಿ, ಮಾರಾಟಗಾರರ ಪಟ್ಟಿಗೆ ಮೇಲೆ ಓದಲಾದ ಸರ್ಕಾರದ ಆದೇಶದ ಮೂಲಕ ಅನುಮೋದನೆ ನೀಡಲಾಗಿತ್ತು. ಸದರಿ ಪಟ್ಟಿಯಲ್ಲಿರುವ ಸಂಸ್ಥೆಗಳ ಸಿಂಧುತ್ವವು 31.12.2008ಗೆ ಕೊನೆಗೊಂಡಿರುತ್ತದೆ. 2009–2010ನೇ ಸಾಲಿಗೆ ಹೊಸ ಪಟ್ಟಿ ಸಿದ್ದಪಡಿಸುವ ಪ್ರಕ್ರಿಯೆ ಇನ್ನೂ ಅಂತಿಮವಾಗಿಲ್ಲವಾದ್ದರಿಂದ, ಮೇಲೆ ಓದಲಾದ ಸರ್ಕಾರದ ಆದೇಶದನ್ವಯ ಚಾಲ್ತಿಯಲ್ಲಿದ್ದ ಮಾರಾಟಗಾರರ ಪಟ್ಟಿಯ ಸಿಂಧುತ್ವವನ್ನು 31–3–2009ರವರೆಗೆ ಅಥವಾ ಹೊಸ ಪಟ್ಟಿ ಸಿದ್ದಗೊಳ್ಳುವವರಿಗೆ ಯಾವುದೂ ಮೊದಲು ಅಲ್ಲಿಯವರೆಗೆ ವಿಸ್ತರಿಸುವುದು ಅವಶ್ಯವಾಗಿದೆ. ಅದರಂತೆ ಕೆಳಕಾಣಿಸಿದ ಸರ್ಕಾರದ ಆದೇಶವನ್ನು ಪ್ರಸ್ತಾಪಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 7 ವಿಮಅ 2006, ಬೆಂಗಳೂರು, ದಿನಾಂಕ: 5ನೇ ಜನವರಿ 2009.**

ರಾಜ್ಯದಲ್ಲಿರುವ ವಿವಿಧ ಸರ್ಕಾರಿ ಕಛೇರಿಗಳಲ್ಲಿ ಗಣಕೀಕರಣಕ್ಕಾಗಿ ಅವಶ್ಯವಿರುವ ಗಣಕ ಯಂತ್ರಗಳು, ಪ್ರಿಂಟರ್‌ಗಳು, ಅವುಗಳ ಪೂರಕ ಸಾಧನಗಳು, ವಿವಿಧ ತಂತ್ರಾಂಶಗಳು, ತಂತ್ರಾಂಶ ಸಿದ್ದಪಡಿಸುವ, ನೆಟ್ ವರ್ಕಿಂಗ್, ಯು.ಪಿ.ಎಸ್., ತರಬೇತಿ, ವೆಬ್ ಡಿಸೈನಿಂಗ್, ಡೇಟಾ ಎಂಟ್ರಿ ಹಾಗೂ ವಾರ್ಷಿಕ ನಿರ್ವಹಣೆ ಮುಂತಾದ ಸಾಮಗ್ರಿ/ಸೇವೆಗಳನ್ನು ಪೂರೈಸುವುದಕ್ಕಾಗಿ ಮೇಲೆ ಓದಲಾದ ಸರ್ಕಾರದ ಆದೇಶದಲ್ಲಿನ ಸಂಸ್ಥೆಗಳ ಸಿಂಧುತ್ವವನ್ನು ದಿನಾಂಕ 31–3–2009ರವರೆಗೆ ಅಥವಾ ಹೊಸ ಪಟ್ಟಿ ಸಿದ್ದಗೊಳ್ಳುವವರಿಗೆ ಯಾವುದು ಮೊದಲು ಅಲ್ಲಿಯವರೆಗೆ ವಿಸ್ತರಿಸಲು ಸರ್ಕಾರದ ಅನುಮೋದನೆ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.282

**ಗಂಗಾಧರ ನಿಂ. ದಾಟನಾಳ**

ಪೀಠಾಧಿಕಾರಿ, ಇ–ಆಡಳಿತ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಆಸು)

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಕೆ.ಟಿ. ಬಾಲಕೃಷ್ಣ, ಎಸ್.ಪಿ. (ನಾನ್ ಐಪಿಎಸ್) ಡಿ.ಸಿ.ಆರ್.ಇ. ಮೈಸೂರು ರವರ ವಿರುದ್ಧ ನಡೆದ ಲೋಕಾಯುಕ್ತ ದಾಳಿಗೆ ಸಂಬಂಧಿಸಿದಂತೆ, ಸದರಿಯವರನ್ನು ಸೇವೆಯಿಂದ ಅಮಾನತ್ತುಗೊಳಿಸುವ ಬಗ್ಗೆ.

**ಓದಲಾಗಿದೆ:** 1. ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರ ಕಛೇರಿ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ರವರ ಪತ್ರ ಸಂಖ್ಯೆ: ಲೋಕ್/ಐಎನ್‌ವಿ(ಜಿ)/ಎಂ-46/ಸಿಆರ್-10/2008, ದಿನಾಂಕ 4-12-2008.

2. ಡಿಜಿ ಮತ್ತು ಐಜಿಪಿ ರವರ ಪತ್ರ ಸಂಖ್ಯೆ: ಸಿಬಿ(5):57:08-09, ದಿನಾಂಕ 11-12-2008.

**ಪ್ರಸ್ತಾವನೆ :**

ಶ್ರೀ ಕೆ.ಟಿ. ಬಾಲಕೃಷ್ಣ, ಪೊಲೀಸ್ ಅಧೀಕ್ಷಕರು, ಡಿ.ಸಿ.ಆರ್.ಇ. ಮೈಸೂರು ರವರು ತಮ್ಮ ಎಲ್ಲಾ ಬಲ್ಲ ಮೂಲಗಳ ಆದಾಯಕ್ಕಿಂತ ಹೆಚ್ಚಿನ ಸಂಪತ್ತು ಹೊಂದಿರುತ್ತಾರೆ ಎಂಬ ನಂಬಲರ್ಹ ಮಾಹಿತಿ ಆಧಾರದ ಮೇಲೆ ಇವರ ವಿರುದ್ಧ ಮೈಸೂರು ಲೋಕಾಯುಕ್ತ ಪೊಲೀಸ್ ಠಾಣೆಯಲ್ಲಿ ಮೊಕದ್ದಮೆ ಸಂಖ್ಯೆ: 16/2008ರಲ್ಲಿ ಪ್ರಕರಣವನ್ನು ದಾಖಲಿಸಿಕೊಂಡು ದಿನಾಂಕ 27-11-2008 ರಂದು ಇವರ ವಾಸದ ಮನೆ, ಇವರ ಅತ್ತೆಯವರು ವಾಸವಾಗಿರುವ ಮನೆ ಹಾಗೂ ಇವರು ಕರ್ತವ್ಯ ನಿರ್ವಹಿಸುವ ಕಛೇರಿ ಇತ್ಯಾದಿಗಳನ್ನು ಶೋಧಿಸಿದಾಗ ಪತ್ತೆಯಾಗಿರುವ ಸ್ಥಿರಾಸ್ಥಿ, ಚರಾಸ್ಥಿ ಇತ್ಯಾದಿ ವಿವರಗಳನ್ನು ಹಾಗೂ ಅಗತ್ಯ ದಾಖಲೆಗಳನ್ನು ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ಎ.ಡಿ.ಜಿ.ಪಿ., ಲೋಕಾಯುಕ್ತ ರವರು ಒದಗಿಸಿರುತ್ತಾರೆ. ಇವರ ವರದಿಯ ಅನ್ವಯ ಹೆಚ್ಚುವರಿಯಾಗಿ ಹೊಂದಿರುವ ಆಸ್ತಿಯ ಅಂದಾಜು ರೂ. 46,95,575/- ಇದ್ದು, ಸೋರ್ಸ್ ವರದಿಯ ಪ್ರಕಾರ ಇವರ ಅಂದಾಜು ಆದಾಯ ರೂ. 28,00,000/-ಗಳೆಂದು, ಆರೋಪಿತರು, ಹೊಂದಿರುವ ಶೇಕಡಾವಾರು ಅಕ್ರಮ ಆಸ್ತಿ 569.00%. ಆಗಿರುತ್ತದೆ. ಮುಂದುವರೆದು, ಶ್ರೀ ಕೆ.ಟಿ. ಬಾಲಕೃಷ್ಣ, ಪೊಲೀಸ್ ಅಧೀಕ್ಷಕರು, ಡಿ.ಸಿ.ಆರ್.ಇ. ಮೈಸೂರು ಇವರು ಪ್ರಕರಣದ ಸುಗಮ ತನಿಖೆಗೆ ಅಡ್ಡಿ ಉಂಟು ಮಾಡುವ ಅಥವಾ ತನಿಖೆಯಲ್ಲಿ ಹಸ್ತಕ್ಷೇಪ ಮಾಡುವ ಹಾಗೂ ಸಾಕ್ಷಿ ಪುರಾವೆಗಳನ್ನು ನಾಶಗೊಳಿಸುವ ಸಾಧ್ಯತೆಗಳಿರುವುದರಿಂದ ಅವರನ್ನು ಕೂಡಲೇ ಸೇವೆಯಿಂದ ಅಮಾನತ್ತುಗೊಳಿಸಿ ಲೀನ್ ಅನ್ನು ಬೇರೆ ಕಡೆಗೆ ವರ್ಗಾಯಿಸುವಂತೆ ಕೋರಿರುತ್ತಾರೆ. ಶ್ರೀ ಕೆ.ಟಿ. ಬಾಲಕೃಷ್ಣ ರವರು ದಿನಾಂಕ 5-12-2008ರಂದು ಸರ್ಕಾರಕ್ಕೆ ಸಲ್ಲಿಸಿರುವ ಮನವಿಯಲ್ಲಿನ ಸಮಜಾಯಿಷಿ ಮತ್ತು ವಿವರಣೆಗಳನ್ನು ಸಹ ಪರಿಶೀಲಿಸಲಾಗಿದೆ. ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಡಿಜಿ ಮತ್ತು ಐಜಿಪಿ ರವರು ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಅಮಾನತ್ತುಗೊಳಿಸಲು ಶಿಫಾರಸ್ಸು ಮಾಡಿರುತ್ತಾರೆ.

ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 481 ಪೊಸಿಪ 2008, ಬೆಂಗಳೂರು, ದಿನಾಂಕ: 5ನೇ ಜನವರಿ 2009.**

ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು, 1965ರ ನಿಯಮ 5(1)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಕೆ.ಟಿ. ಬಾಲಕೃಷ್ಣ, ಎಸ್.ಪಿ. (ನಾನ್ ಐಪಿಎಸ್) ಡಿ.ಸಿ.ಆರ್.ಇ., ಮೈಸೂರು ರವರ ವಿರುದ್ಧ ಶಿಸ್ತು ಕ್ರಮ ಕಾಯ್ದಿಟ್ಟು, ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಈ ಮೂಲಕ ಸೇವೆಯಿಂದ ಅಮಾನತ್ತಿನಲ್ಲಿಡಲಾಗಿದೆ.

ಅಮಾನತ್ತಿನ ಅವಧಿಯಲ್ಲಿ ಶ್ರೀ ಕೆ.ಟಿ. ಬಾಲಕೃಷ್ಣ, ಎಸ್.ಪಿ. (ನಾನ್ ಐಪಿಎಸ್) ರವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 98ರ ಅನ್ವಯ ಜೀವನಾಧಾರ ಭತ್ಯೆಯನ್ನು ನೀಡತಕ್ಕದ್ದು.

ಅಮಾನತ್ತಿನ ಅವಧಿಯಲ್ಲಿ ಶ್ರೀ ಕೆ.ಟಿ. ಬಾಲಕೃಷ್ಣ ಎಸ್.ಪಿ. (ನಾನ್ ಐಪಿಎಸ್) ರವರು ಸಕ್ಷಮ ಪ್ರಾಧಿಕಾರದ ಅನುಮೋದನೆ ಪಡೆಯದೆ ಕೇಂದ್ರಸ್ಥಾನವನ್ನು ಬಿಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.275

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಬೆಳಗಾಂ ಜಿಲ್ಲೆ, ರಾಜದುರ್ಗ ತಾಲ್ಲೂಕು ಕಾಮನಕೊಪ್ಪ, ಸಿದ್ನಾಳ ಹಾಗೂ ಬೀಜಗುಪ್ಪಿ ಗ್ರಾಮಗಳ ಹದ್ದಿಯಲ್ಲಿ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನ ಪಡಿಸಿಕೊಳ್ಳಲಾದ ಜಮೀನುಗಳಿಗೆ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರ ಧನದ ಮೇಲೆ ಬಾಕಿ ಬಡ್ಡಿ ಪಾವತಿಸುವ ಕುರಿತು.

**ಓದಲಾಗಿದೆ:** 1. ದಿನಾಂಕ 19-9-2006ರ ಸರ್ಕಾರದ ಆದೇಶ ಸಂಖ್ಯೆ: ಸನೀಇ 45 ಭೂಸ್ವಾಪ್ರ 2004.

2. ಮುಖ್ಯ ಇಂಜಿನಿಯರ್ ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ದಿನಾಂಕ 24-11-2008ರ ಪತ್ರ ಸಂಖ್ಯೆ: ಮುಇಂ/ಸನೀ(ಉ)ವ/ಭೂಸ್ವಾಪ್ರ/2008-09/6211.

**ಪ್ರಸ್ತಾವನೆ :**

ಬೆಳಗಾಂ ಜಿಲ್ಲೆ, ರಾಮದುರ್ಗ ತಾಲ್ಲೂಕು, ಕಾಮನಕೊಪ್ಪ, ಸಿದ್ನಾಳ ಹಾಗೂ ಬೀಜಗುಪ್ಪಿ ಗ್ರಾಮಗಳ ಹದ್ದಿಯಲ್ಲಿ ಚಿಪ್ಪಲಕಟ್ಟಿ ಕೆರೆ ಹಾಗೂ ಕಾಲುವೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳ ಪೈಕಿ ಕೆಲವು ಭೂಮಾಲೀಕರು ಹೆಚ್ಚಿನ ಪರಿಹಾರ ಧನಕ್ಕಾಗಿ ಭೂಸ್ವಾಧೀನ ಕಾಯ್ದೆ 18(1)ರಡಿ ಸವದತ್ತಿ ಸಿವಿಲ್ ಜಡ್ಜ್ (ಹಿರಿಯ ಶ್ರೇಣಿ) ನ್ಯಾಯಾಲಯದಲ್ಲಿ ದಾಖಲಿಸಿದ್ದ ಎಲ್.ಎ.ಸಿ. ಪ್ರಕರಣ ಸಂಖ್ಯೆ: 289/02, 290/02, 291/02, 292/02, 293/02, 294/02, 295/02, 296/02, 297/02, 298/02, 300/02, 302/02, 303/02, 304/02, 305/02, 306/02, 42/03, 45/03, 46/03,. 47/03 ಮತ್ತು 49/02ರ ಒಟ್ಟು 22 ಪ್ರಕರಣಗಳಲ್ಲಿ ನ್ಯಾಯಾಲಯವು ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದ್ದು, ಈ ತೀರ್ಪಿನಲ್ಲಿ ಹೆಚ್ಚಿಸಿದ ಪರಿಹಾರ ಧನದ ಮೇಲೆ ಜಮೀನುಗಳನ್ನು ಕಬ್ಜೆ ಪಡೆದ ದಿನಾಂಕದಿಂದ ಬಡ್ಡಿ ಪಾವತಿಸಲು ಆದೇಶಿಸಿತ್ತು. ಈ ತೀರ್ಪಿನ ವಿರುದ್ಧ ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ಸರ್ಕಾರದಿಂದ ದಾಖಲಿಸಿದ್ದ ಎಂ.ಎಫ್.ಎ. ಪ್ರಕರಣ ಸಂಖ್ಯೆ: 172/05, ದಿನಾಂಕ 22–8–06ರ ತೀರ್ಪಿನಲ್ಲಿ ವಜಾಗೊಂಡಿದೆ. ಆದಾಗ್ಯೂ ಉಚ್ಚ ನ್ಯಾಯಾಲಯದ ಈ ತೀರ್ಪಿನ ವಿರುದ್ಧ ಮಾನ್ಯ ಸರ್ವೋಚ್ಚ ನ್ಯಾಯಾಲಯದಲ್ಲಿ ಎಸ್.ಎಲ್.ಪಿ. ಸಂಖ್ಯೆ: 5592/07ನ್ನು ದಾಖಲಿಸಲಾಗಿತ್ತು. ಈ ಮಧ್ಯೆ ಮಾನ್ಯ ಉಚ್ಚ ನ್ಯಾಯಾಲಯದಲ್ಲಿ ಪ್ರಕರಣ ಸರ್ಕಾರದ ವಿರುದ್ಧವಾಗಿ ಆಗಿದ್ದುದರಿಂದ, ಮುಂದೆ ಉಂಟಾಗಬಹುದಾದ ಬಡ್ಡಿ ರೂಪದ ಆರ್ಥಿಕ ಹೊರೆಯನ್ನು ತಪ್ಪಿಸುವ ಸಲುವಾಗಿ ಸಿವಿಲ್ ನ್ಯಾಯಲಯವು ಹೆಚ್ಚಿಸಿರುವ ಪರಿಹಾರ ಧನವನ್ನು 4(1)ರ ಅಧಿಸೂಚನೆ ದಿನಾಂಕದಿಂದ ಲೆಕ್ಕಹಾಕಿದ ಬಡ್ಡಿಯೊಂದಿಗೆ ಭೂಮಾಲೀಕರಿಗೆ ಪಾವತಿಸುವ ಸಲುವಾಗಿ ನ್ಯಾಯಲಯದಲ್ಲಿ ಠೇವಣಿ ಇಡಲು ಮೇಲೆ (1)ರಲ್ಲಿ ಓದಲಾದ ದಿನಾಂಕ 19–9–2006ರ ಸರ್ಕಾರದ ಆದೇಶದಲ್ಲಿ ಅನುಮೋದನೆ ನೀಡಲಾಗಿದೆ.

ಈ ಪ್ರಕರಣದಲ್ಲಿ ಭೂಸ್ವಾಧೀನ ಕಾಯ್ದೆ ಕಲಂ 4(1)ರ ಅಧಿಸೂಚನೆಗೂ ಮೊದಲೇ ಜಮೀನನ್ನು ಕಬ್ಜೆ ಪಡೆದಿದ್ದು, ಕಬ್ಜೆ ಪಡೆದ ದಿನಾಂಕದಿಂದ ಪರಿಹಾರ ಧನದ ಮೇಲೆ ಬಡ್ಡಿ ಪಾವತಿಸುವ ವಿಷಯದಲ್ಲಿ ಮಾನ್ಯ ಉಚ್ಚ ನ್ಯಾಯಾಲಯವು ಎಂ.ಎಫ್.ಎ. ಪ್ರಕರಣ ಸಂಖ್ಯೆ: 172/05ರಲ್ಲಿ ನೀಡಿದ ತೀರ್ಪಿನ ವಿರುದ್ಧ ಭಾರತ ಸರ್ವೋಚ್ಚ ನ್ಯಾಯಾಲಯದಲ್ಲಿ ದಾಖಲಿಸಿ ಎಸ್.ಎಲ್.ಪಿ. 5592/07, ದಿನಾಂಕ 17–9–08ರಂದು ವಜಾಗೊಂಡಿರುವುದರಿಂದ, ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ತಿಳಿಸಿರುವ 22 ಎಲ್.ಎ.ಸಿ. ಪ್ರಕರಣಗಳಲ್ಲಿ ಜಮೀನನ್ನು ಇಲಾಖೆಗೆ ಕಬ್ಜೆ ಪಡೆದ ದಿನಾಂದಿಂದ ಭೂಸ್ವಾಧೀನ ಕಾಯ್ದೆ ಕಲಂ 4(1)ರ ಅಧಿಸೂಚನೆ ಹೊರಡಿಸಿದ ದಿನಾಂಕದವರೆಗೆ ಸಿವಿಲ್ ನ್ಯಾಯಾಲಯವು ಹೆಚ್ಚಿಸಿರುವ ಪರಿಹಾರ ಧನದ ಮೇಲೆ ನೀಡಬೇಕಾದ ಬಡ್ಡಿಯ ಬಾಕಿ ಮೊತ್ತವನ್ನು ಪಾವತಿಸಲು ಒಟ್ಟು ರೂ. 93,76,365–00ಗಳನ್ನು ಬಿಡುಗಡೆ ಮಾಡುವಂತೆ ಮೇಲೆ (2)ರಲ್ಲಿ ಓದಲಾದ ದಿನಾಂಕ 24–11–08ರ ಪತ್ರದಲ್ಲಿ ಬಿಜಾಪುರ ಸಣ್ಣ ನೀರಾವರಿ ಉತ್ತರ ವಲಯದ ಮುಖ್ಯ ಇಂಜಿನಿಯರ್‌ರವರು ಕೋರಿರುತ್ತಾರೆ.

ವಿಷಯವನ್ನು ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 45 ಭೂಸ್ವಾಪ್ರ 2004, ಬೆಂಗಳೂರು, ದಿನಾಂಕ: 10ನೇ ಡಿಸೆಂಬರ್ 2008.**

ಬೆಳಗಾಂ ಜಿಲ್ಲೆ, ರಾಮದುರ್ಗ ತಾಲ್ಲೂಕು, ಕಾಮನಕೊಪ್ಪ, ಸಿದ್ನಾಳ ಹಾಗೂ ಬೀಜಗುಪ್ಪಿ, ಗ್ರಾಮಗಳ ಹದ್ದಿಯಲ್ಲಿ ಚಿಪ್ಪಲಕಟ್ಟಿ ಕೆರೆ ಹಾಗೂ ಕಾಲುವೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ಪ್ರಸ್ತಾವನೆಯಲ್ಲಿ ತಿಳಿಸಿರುವ ಎಲ್.ಎ.ಸಿ. ಪ್ರಕರಣಗಳಿಗೆ ಸಿವಿಲ್ ನ್ಯಾಯಲಯವು ಹೆಚ್ಚಿಸಿದ ಪರಿಹಾರ ಧನದ ಮೇಲೆ ಜಮೀನುಗಳನ್ನು ಇಲಾಖೆಯ ವಶಕ್ಕೆ ಕಬ್ಜೆ ಪಡೆದ ದಿನಾಂಕದಿಂದ ಭೂಸ್ವಾಧೀನ ಕಾಯ್ದೆ ಕಲಂ 4(1)ರ ಅಧಿಸೂಚನೆಯ ದಿನಾಂಕದವರೆಗೆ ಲೆಕ್ಕ ಹಾಕಿದ ಬಡ್ಡಿಯ ಒಟ್ಟು ಬಾಕಿ ಮೊತ್ತ ರೂ. 93,76,365–00ಗಳನ್ನು (ತೊಂಭತ್ಮೂರು ಲಕ್ಷದ ಎಪ್ಪತ್ತಾರು ಸಾವಿರದ ಮುನ್ನೂರ ಅರವತ್ತೈದು ರೂ.ಗಳು ಮಾತ್ರ) ಪಾವತಿಸಲು ಸರ್ಕಾರವು ಅನುಮೋದನೆ ನೀಡಿದೆ.

ಈ ವೆಚ್ಚವನ್ನು 2008–09ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ 4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಕೂಡಲೇ ಸಂಬಂಧಿಸಿದ ಸಣ್ಣ ನೀರಾವರಿ ಅಧಿಕಾರಿಗಳು ವರ್ಗಾವಣೆ ಬಗ್ಗೆ ಕ್ರಮ ಕೈಗೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂ: ಎಫ್‌ಡಿ 21 ಟಿಎಫ್‌ಪಿ 2006, ದಿನಾಂಕ 2–9–2006ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.56

**ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

**ವಿಷಯ :** ಹಾವೇರಿ ಜಿಲ್ಲೆಯ ಹಾವೇರಿ ನಗರಕ್ಕೆ ಬೇಸಿಗೆ ಕಾಲದಲ್ಲಿ ಕುಡಿಯುವ ನೀರು ಒದಗಿಸಲು ಹಾವೇರಿ ತಾಲ್ಲೂಕಿನ ಹೆಗ್ಗೇರಿ ಸಣ್ಣ ನೀರಾವರಿ ಕೆರೆಯನ್ನು ಹಾವೇರಿ ನಗರಸಭೆಗೆ ಹಸ್ತಾಂತರಿಸುವ ಬಗ್ಗೆ.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ಉತ್ತರ ವಲಯ), ಬಿಜಾಪುರರವರ ಪತ್ರ ಸಂಖ್ಯೆ: ಮುಇಂ/ ಸನೀ(ಉ)ವ/ಬಿಜೆಪಿ/ಪಿಬಿ–3/2007–08/6455, ದಿನಾಂಕ 5–12–2008.

**ಪ್ರಸ್ತಾವನೆ :**

ಹಾವೇರಿ ಜಿಲ್ಲೆ, ಹಾವೇರಿ ತಾಲ್ಲೂಕಿನಲ್ಲಿರುವ ಸಣ್ಣ ನೀರಾವರಿ ಇಲಾಖೆಯ ವ್ಯಾಪ್ತಿಯಲ್ಲಿ ಬರುವ ಹೆಗ್ಗೇರಿ ಕೆರೆಯನ್ನು ಕರ್ನಾಟಕ ನಗರ ಮೂಲಸೌಕರ್ಯ ಅಭಿವೃದ್ಧಿ ಮತ್ತು ಹಣಕಾಸು ಸಂಸ್ಥೆಯ ಮುಖಾಂತರ ರೂ. 38.14 ಕೋಟಿ ವೆಚ್ಚದಲ್ಲಿ ಅಭಿವೃದ್ಧಿಪಡಿಸುವ ಮೂಲಕ ಹಾವೇರಿ ನಗರಕ್ಕೆ ಕುಡಿಯುವ ನೀರನ್ನು ಸಂಗ್ರಹಿಸಿ ಸರಬರಾಜು ಮಾಡಲು ಯೋಜನೆ ಹಮ್ಮಿಕೊಂಡಿರುವುದರಿಂದ, ಸದರಿ ಕೆರೆಯನ್ನು ಹಾವೇರಿ ನಗರಸಭೆಗೆ ಹಸ್ತಾಂತರಿಸುವಂತೆ ಪೌರಾಯುಕ್ತರು, ನಗರಸಭೆ, ಹಾವೇರಿ ಇವರು ಕೋರಿರುತ್ತಾರೆ.

ಹಾವೇರಿ ತಾಲ್ಲೂಕಿನ ಹೆಗ್ಗೇರಿ ಕೆರೆಯು 212 ಹೆಕ್ಟೇರ್ ಅಚ್ಚುಕಟ್ಟು ಪ್ರದೇಶ ಹೊಂದಿರುತ್ತದೆ. ಸದರಿ ಕೆರೆಯನ್ನು ಕುಡಿಯುವ ನೀರಿನ ಸರಬರಾಜಿಗಾಗಿ ಹಾವೇರಿ ನಗರಸಭೆಗೆ ಹಸ್ತಾಂತರಿಸಿದಲ್ಲಿ ಕರ್ನಾಟಕ ನಗರ ಮೂಲಸೌಕರ್ಯ ಅಭಿವೃದ್ಧಿ ಮತ್ತು ಹಣಕಾಸು ಸಂಸ್ಥೆಯ (KUIDFC) ಮೂಲಕ ಕೆರೆಯು ಅಭಿವೃದ್ಧಿ ಹೊಂದುವುದಲ್ಲದೆ, ಪೂರ್ಣ ಪ್ರಮಾಣದ ನೀರು ಸಂಗ್ರಹವಾಗಿ ಅದರಿಂದ ಅಚ್ಚುಕಟ್ಟು ಪ್ರದೇಶಕ್ಕೆ ನೀರನ್ನು ಒದಗಿಸಲು ಅನುಕೂಲವಾಗುತ್ತದೆ. ಆದ್ದರಿಂದ, ಕೆಲವೊಂದು ಷರತ್ತುಗಳನ್ನು ಅಳವಡಿಸಿ ಸದರಿ ಕೆರೆಯನ್ನು ನಗರ ಸಭೆಗೆ ಹಸ್ತಾಂತರ ಮಾಡಬಹುದೆಂದು ಮುಖ್ಯ ಅಭಿಯಂತರರು, ಸಣ್ಣ ನೀರಾವರಿ ಬಿಜಾಪುರ ಇವರು ಮೇಲೆ ಓದಲಾದ ದಿನಾಂಕ 5–12–2008ರ ಪತ್ರದಲ್ಲಿ ಪ್ರಸ್ತಾಪಿಸಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 86 ಕೆಜಿದು 2008, ಬೆಂಗಳೂರು, ದಿನಾಂಕ: 1ನೇ ಜನವರಿ 2009.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಹಾವೇರಿ ಜಿಲ್ಲೆಯ ಹಾವೇರಿ ನಗರಕ್ಕೆ ಬೇಸಿಗೆ ಕಾಲದಲ್ಲಿ ಕುಡಿಯುವ ನೀರು ಒದಗಿಸಲು ಹಾವೇರಿ ತಾಲ್ಲೂಕಿನ ಹೆಗ್ಗೇರಿ ಸಣ್ಣ ನೀರಾವರಿ ಕೆರೆಯನ್ನು ಅಭಿವೃದ್ಧಿಪಡಿಸುವ ಸಲುವಾಗಿ ಹಾವೇರಿ ನಗರಸಭೆಗೆ ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಹಸ್ತಾಂತರಿಸಲು ಅನುಮತಿ ನೀಡಿದೆ.

1. ಹಾಲಿ ಇರುವ ಕೆರೆಯ ಅಚ್ಚುಕಟ್ಟುದಾರರಿಗೆ ಯಾವುದೇ ತೊಂದರೆಯಾಗದಂತೆ ನೋಡಿಕೊಳ್ಳುವುದು.
2. ಕೆರೆಯ ಅಭಿವೃದ್ಧಿ ಕಾಮಗಾರಿಗಳನ್ನು ನಿರ್ವಹಿಸುವಾಗ ಕೆರೆಯ ಏರಿ, ತೂಬು, ಕೋಡಿಯ ಮೂಲ ಸ್ವರೂಪಕ್ಕೆ ಧಕ್ಕೆಯಾಗದಂತೆ, ವಿನ್ಯಾಸ ಮತ್ತು ಮಾರ್ಪಾಟುಗಳ ಕಾರ್ಯನಿರ್ವಹಿಸುವುದು.
3. ಕೆರೆಯಲ್ಲಿ ಕನಿಷ್ಟಮಟ್ಟದವರೆಗೆ ನೀರು ಶೇಖರಣೆಯಾಗುವವರೆಗೆ ಕೆರೆಯಿಂದ ನೀರನ್ನು ಬಳಸಬಾರದು.
4. ನೀರು ಸರಬರಾಜು ಯೋಜನೆಯ ನೀಲಿ ನಕಾಶೆಯನ್ನು ಪಡೆದು, ಸಣ್ಣ ನೀರಾವರಿ ಇಲಾಖೆಯಲ್ಲಿ ದಾಖಲಿಸುವುದು.
5. ಕುಡಿಯುವ ನೀರಿನ ಪೂರೈಕೆಯಿಂದಾಗಿ, ಕೈಗೊಳ್ಳುವ ಯಾವುದೇ ಕಾಮಗಾರಿಯಿಂದ ಹಾನಿ ಉಂಟಾದಲ್ಲಿ, ಅದಕ್ಕೆ ನಗರಸಭೆ, ಹಾವೇರಿ ಇವರು ಹೊಣೆಯಾಗಿರುತ್ತಾರೆ.
6. ಕೆರೆಯ ನೀರು ಬಳಕೆದಾರರ ಸಂಘದಿಂದ ಸೂಕ್ತ ಅನುಮತಿ ಪಡೆಯುವುದು.
7. ಕೆರೆಯ ವಾರ್ಷಿಕ ನಿರ್ವಹಣೆಗೆ ತಗಲುವ ಶೇ. 25ರಷ್ಟು ವೆಚ್ಚವನ್ನು ಹಾವೇರಿ ನಗರಸಭೆಯು ಭರಿಸುವುದು.
8. ಮೇಲೆ ತಿಳಿಸಿರುವ ಎಲ್ಲಾ ನಿಬಂಧನೆಗಳನ್ನೊಳಗೊಂಡ ಒಂದು ತಿಳುವಳಿಕೆ ಪತ್ರವನ್ನು ತಯಾರಿಸಿ ಅದಕ್ಕೆ ನಗರಸಭೆ, ಹಾವೇರಿ ಇದರ ಪೌರಾಯುಕ್ತರು ಹಾಗೂ ಸಣ್ಣ ನೀರಾವರಿ ವಿಭಾಗದ ಕಾರ್ಯಪಾಲಕ ಅಭಿಯಂತರರು, ಜಂಟಿಯಾಗಿ ಸಹಿ ಮಾಡಿ ಅದರ ಮೂಲ ಪ್ರತಿಯನ್ನು ಸಣ್ಣ ನೀರಾವರಿ ಇಲಾಖೆಯಲ್ಲಿ ದಾಖಲಿಸುವುದು.
9. ಕರ್ನಾಟಕ ನಗರ ಮೂಲಸೌಕರ್ಯ ಅಭಿವೃದ್ಧಿ ಮತ್ತು ಹಣಕಾಸು ಸಂಸ್ಥೆಯು (KUIDFC) ತಯಾರಿಸುವ ಸದರಿ ಕೆರೆಯ ಅಭಿವೃದ್ಧಿ ಅಂದಾಜನ್ನು ಸಣ್ಣ ನೀರಾವರಿ ಇಲಾಖೆಯ ಮಾನದಂಡಗಳ ಅನುಸಾರ ತಯಾರಿಸಿ, ಸೂಕ್ತ ತಾಂತ್ರಿಕ ಮಂಜೂರಾತಿ ಪಡಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.262

**ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ನಗರಾಭಿವೃದ್ಧಿ ಸಚಿವಾಲಯ

**ವಿಷಯ :** ವಿಜಯನಗರ ನಗರಾಭಿವೃದ್ಧಿ ಪ್ರಾಧಿಕಾರ ರಚಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಅಧಿಸೂಚನೆ ಸಂಖ್ಯೆ: ನಅಇ 196 ಬೆಮಪ್ರಾ 2008, ದಿನಾಂಕ 20–8–2008.

2. ನಿರ್ದೇಶಕರು, ನಗರ ಯೋಜನಾ ಇಲಾಖೆ ರವರ ಏಕ ಕಡತ ಸಂಖ್ಯೆ: ನಯೋ:ಉನಿ:ಬಳ್ಳಾರಿ: ವಿನಪ್ರಾ:2008, ದಿ: 21–11–2008 ರವರ ಪ್ರಸ್ತಾವನೆ.

**ಪ್ರಸ್ತಾವನೆ :**

ಬಳ್ಳಾರಿ ಜಿಲ್ಲೆಯ ಬಳ್ಳಾರಿ, ಹೊಸಪೇಟೆ ಮತ್ತು ಸಂಡೂರು ತಾಲ್ಲೂಕುಗಳಲ್ಲಿನ ಕೆಲವೊಂದು ಹಳ್ಳಿಗಳನ್ನು ಕ್ರೋಢೀಕರಿಸಿ ಸದರಿ ಪ್ರದೇಶವನ್ನು ಯೋಜನಾಬದ್ಧವಾಗಿ ಸಮಗ್ರ ರೀತಿಯಲ್ಲಿ ಅಭಿವೃದ್ಧಿಪಡಿಸಲು "ವಿಜಯನಗರ" ಎಂಬ ಹೊಸ ಆರ್ಥಿಕ ವಲಯವನ್ನು ಸ್ಥಾಪಿಸಲು ಸರ್ಕಾರವು ಮೇಲೆ ಓದಲಾದ ಕ್ರಮಾಂಕ (1)ರಲ್ಲಿ ಪ್ರವಾಸೋದ್ಯಮ, ಮೂಲಭೂತ ಸೌಕರ್ಯ ಸಚಿವರ ಅಧ್ಯಕ್ಷತೆಯಲ್ಲಿ 23 ಸದಸ್ಯರನ್ನೊಳಗೊಂಡಂತೆ ಒಂದು ಸಮಿತಿಯನ್ನು ರಚಿಸಿದೆ.

ಈ ಸಮಿತಿಯು ದಿನಾಂಕ 17–9–2008ರಂದು ಪ್ರವಾಸೋದ್ಯಮ ಮತ್ತು ಮೂಲಭೂತ ಸೌಕರ್ಯ ಸಚಿವರ ಅಧ್ಯಕ್ಷತೆಯಲ್ಲಿ ಬಳ್ಳಾರಿ ಜಿಲ್ಲಾಧಿಕಾರಿಗಳ ಸಭಾಂಗಣದಲ್ಲಿ ಸಭೆ ಸೇರಿ ಚರ್ಚಿಸಿ ಅಂತಿಮವಾಗಿ ಈ ಕೆಳಕಂಡ ನಿರ್ಣಯವನ್ನು ಕೈಗೊಂಡಿದೆ.

1. ವಿಜಯನಗರ ಪ್ರದೇಶ ಅಭಿವೃದ್ಧಿ ಪ್ರಾಧಿಕಾರ (ವಾಡಾ) ದಿಂದ ಅಭಿವೃದ್ಧಿಪಡಿಸಲು ಉದ್ದೇಶಿಸಿರುವ ಅಭಿವೃದ್ಧಿ ಕಾಮಗಾರಿಗಳ ವಿವರ ಅದರಿಂದ ಸಂಬಂಧಪಟ್ಟ ಗ್ರಾಮಗಳಿಗೆ ಆಗುವ ಅನುಕೂಲಗಳು ಇದಕ್ಕೆ ಮೂಲಸೌಲಭ್ಯಗಳನ್ನು ಒದಗಿಸಲು ತಗಲುವ ವೆಚ್ಚದ ಸಂಗ್ರಹಣೆ ಬಗ್ಗೆ ಜಿಂದಾಲ್ ಸಂಸ್ಥೆಯವರು ಸೆಪ್ಟ್ ವರದಿಯೊಂದಿಗೆ ಪೂರ್ಣ ಮಾಹಿತಿಯನ್ನು ಬಳ್ಳಾರಿ ನಗರಾಭಿವೃದ್ಧಿ ಪ್ರಾಧಿಕಾರದ ಮುಖಾಂತರ 15 ದಿನಗಳಲ್ಲಿ ಸರ್ಕಾರಕ್ಕೆ ಸಲ್ಲಿಸುವುದು.
2. ನಗರ ಯೋಜನಾ ನಿರ್ದೇಶಕರ ಪ್ರತಿನಿಧಿಯವರು ತಿಳಿಸಿರುವಂತೆ ಕರ್ನಾಟಕ ಮುನಿಸಿಪಾಲಿಟಿಸ್ ಕಾಯ್ದೆ 1964ರ ಕಲಂ 364ಎ ರನ್ವಯ ವಿಜಯನಗರ ಇಂಡಸ್ಟ್ರೀಯಲ್ ಟೌನ್‌ಶಿಪ್ ಆಥಾರಿಟಿ ಸ್ಥಾಪಿಸುವ ಬಗ್ಗೆ ಹಾಗೂ ವಾಡಾ ಸ್ಥಾಪನೆಗಾಗಿ ಬುಡಾ, ಹುಡಾ ಬಿಟ್ಟುಕೊಡುವ ಗ್ರಾಮಗಳನ್ನೊಳಗೊಂಡ ಸಮಗ್ರ ಅನುಕೂಲ ಹಾಗೂ ಅನಾನುಕೂಲದ ಬಗ್ಗೆ ಅಧ್ಯಯನ ಮಾಡಿ ಈ ಬಗ್ಗೆ ವರದಿ ಹಾಗೂ ವಿಧಿಸಬೇಕಾದ ಷರತ್ತುಗಳ ಪಟ್ಟಿ ಹಾಗೂ ಮಾಹಿತಿಯನ್ನು ನಗರ ಯೋಜನಾ ನಿರ್ದೇಶಕರು, ಸರ್ಕಾರದ ಕಾರ್ಯದರ್ಶಿಗಳು, ನಗರಾಭಿವೃದ್ಧಿ ಇಲಾಖೆ ಇವರಿಗೆ ಸಲ್ಲಿಸುವುದು.

ಮೇಲೆ ಓದಲಾದ ಕ್ರಮಾಂಕ (2)ರನ್ವಯ ನಗರ ಯೋಜನಾ ನಿರ್ದೇಶಕರು ಏಕ ಕಡತದಲ್ಲಿ ಸಲ್ಲಿಸಿದ ಪ್ರಸ್ತಾವನೆಯಲ್ಲಿ ವಿಜಯನಗರ ಇಂಡಸ್ಟ್ರಿಯಲ್ ಟೌನ್‌ಶಿಪ್ ಆಥಾರಿಟಿಯನ್ನು ಕರ್ನಾಟಕ ಮುನಿಸಿಪಾಲಿಟೀಸ್ ಕಾಯ್ದೆ, 1964ರಡಿ ರಚಿಸಲು ಕಾನೂನಿನ ತೊಡಕಿರುವ ಕಾರಣ, ಕರ್ನಾಟಕ ನಗರಾಭಿವೃದ್ಧಿ ಪ್ರಾಧಿಕಾರ ಕಾಯ್ದೆ, 1987ರ ಕಲಂ 3ರಡಿಯಲ್ಲಿ "ವಿಜಯನಗರ ಅಭಿವೃದ್ಧಿ ಪ್ರಾಧಿಕಾರ" ರಚಿಸುವುದು ಸೂಕ್ತವೆಂದು ಶಿಫಾರಸ್ಸು ಮಾಡಿರುತ್ತಾರೆ. ಈ ಹಿನ್ನೆಲೆಯಲ್ಲಿ ಪ್ರಸ್ತುತವಾಗಿ ವಿಜಯನಗರ ಸ್ಥಳೀಯ ಯೋಜನಾ ಪ್ರದೇಶಕ್ಕೆ ಸೇರಿಸಬೇಕಾಗಿರುವ ಒಟ್ಟು 43 ಗ್ರಾಮಗಳ ಹೆಸರು ಮತ್ತು ವಿಸ್ತೀರ್ಣದ ಪಟ್ಟಿಯನ್ನು ಅನುಬಂಧ–1ರಲ್ಲಿ ಹಾಗೂ ಈ ಯೋಜನಾ ಪ್ರದೇಶದ ಸರಹದ್ದಿನ ವಿವರವನ್ನು ಅನುಬಂಧ–2ರಲ್ಲಿ ತೋರಿಸಲಾಗಿದೆ. ಸದರಿ ವಿಜಯನಗರ ಸ್ಥಳೀಯ ಯೋಜನಾ ಪ್ರದೇಶಕ್ಕೆ ಸೇರಿಸಲು ಉದ್ದೇಶಿಸಿರುವ ಒಟ್ಟು 43 ಹಳ್ಳಿಗಳ ಪೈಕಿ ಹಾಲಿ ಬಳ್ಳಾರಿ–ಸಂಡೂರು ಸ್ಥಳೀಯ ಯೋಜನಾ ಪ್ರದೇಶದಿಂದ ಕೈಬಿಡಬೇಕಾದ 31 ಹಳ್ಳಿಗಳ ಹೆಸರು ಮತ್ತು ವಿಸ್ತೀರ್ಣದ ಪಟ್ಟಿಯನ್ನು ಅನುಬಂಧ–3ರಲ್ಲಿ ಹಾಗೂ ಹೊಸಪೇಟೆ ಸ್ಥಳೀಯ ಯೋಜನಾ ಪ್ರದೇಶದಿಂದ ಕೈಬಿಡಬೇಕಾದ 8 ಹಳ್ಳಿಗಳ ಹೆಸರು ಮತ್ತು ವಿಸ್ತೀರ್ಣದ ಪಟ್ಟಿಯನ್ನು ಅನುಬಂಧ–4ರಲ್ಲಿ ತೋರಿಸಲಾಗಿದೆ.

ಪ್ರಸ್ತುತವಾಗಿ, ವಿಜಯನಗರ ಸ್ಥಳೀಯ ಯೋಜನಾ ಪ್ರದೇಶ ರಚಿಸಲು ಉದ್ದೇಶಿಸಿರುವ ಪ್ರದೇಶಗಳನ್ನು ನಕ್ಷೆ–1ರಲ್ಲಿ ಮತ್ತು ಬಳ್ಳಾರಿ–ಸಂಡೂರು ಹಾಗೂ ಹೊಸಪೇಟೆ ನಗರಾಭಿವೃದ್ಧಿ ಪ್ರಾಧಿಕಾರದ ವ್ಯಾಪ್ತಿಯಿಂದ ಹೊರತುಪಡಿಸಬೇಕಾದ ಪ್ರದೇಶಗಳನ್ನು ನಕ್ಷೆ–2ರಲ್ಲಿ ತೋರಿಸಲಾಗಿದೆ.

ಈ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ನಅಇ 196 ಬೆಮಪ್ರಾ 2008, ಬೆಂಗಳೂರು, ದಿನಾಂಕ: 15ನೇ ಡಿಸೆಂಬರ್ 2008.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬಳ್ಳಾರಿ–ಸಂಡೂರು ಸ್ಥಳೀಯ ಯೋಜನಾ ಪ್ರದೇಶದಿಂದ ಅನುಬಂಧ–3ರಲ್ಲಿ ತೋರಿಸಿರುವ 31 ಮತ್ತು ಹೊಸಪೇಟೆ ಸ್ಥಳೀಯ ಯೋಜನಾ ಪ್ರದೇಶದಿಂದ ಅನುಬಂಧ–4ರಲ್ಲಿ ತೋರಿಸಿರುವ 8 ಗ್ರಾಮಗಳನ್ನು ಕೈಬಿಡಲಾಗಿದೆ.

ವಿಜಯನಗರ ಸ್ಥಳೀಯ ಯೋಜನಾ ಪ್ರದೇಶವನ್ನು ಅನುಬಂಧ–1ರಲ್ಲಿ ತೋರಿಸಿರುವ 43 ಗ್ರಾಮಗಳನ್ನೊಳಗೊಂಡಂತೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಕಲಂ 4–ಎ ರನ್ವಯ ತಾತ್ವಿಕವಾಗಿ ಘೋಷಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿ.ಟಿ. ನಾರಾಯಣಸ್ವಾಮಿ**

ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ

**ಅನುಬಂಧ–1**

**ವಿಜಯನಗರ ಸ್ಥಳೀಯ ಯೋಜನಾ ಪ್ರದೇಶಕ್ಕೆ ಸೇರಿಸಬೇಕಾಗಿರುವ ಗ್ರಾಮಗಳ ಯಾದಿ**

| ಕ್ರಮ ಸಂಖ್ಯೆ | ಗ್ರಾಮಗಳ ಹೆಸರು | ಒಟ್ಟು ವಿಸ್ತೀರ್ಣ ಹೆಕ್ಟೇರ್‌ಗಳಲ್ಲಿ | ಷರಾ |
|---|---|---|---|
| | **ಬಳ್ಳಾರಿ ತಾಲ್ಲೂಕು** | | |
| 1 | ವೇಣಿ ವೀರಾಪುರ | 2521.77 | ಪೂರ್ಣ ಕಂದಾಯ ಗ್ರಾಮ |
| 2 | ತಿಮ್ಲಾಪುರ | 1582.44 | ಪೂರ್ಣ ಕಂದಾಯ ಗ್ರಾಮ |
| 3 | ಕುಡಿತಿನಿ | 7833.00 | ಪೂರ್ಣ ಕಂದಾಯ ಗ್ರಾಮ |
| 4 | ಹರಗಿನದೋಣಿ | 2090.49 | ಪೂರ್ಣ ಕಂದಾಯ ಗ್ರಾಮ |
| 5 | ಸಿದ್ದಮ್ಮನಹಳ್ಳಿ | 2811.28 | ಬ.ನ.ಪ್ರಾ.ದ ವ್ಯಾಪ್ತಿಯ ಹೊರಗೆ ಬರುತ್ತದೆ |
| 6 | ಯಲುಬೆಂಚಿ | 2017.65 | ಬ.ನ.ಪ್ರಾ.ದ ವ್ಯಾಪ್ತಿಯ ಹೊರಗೆ ಬರುತ್ತದೆ |
| | **ಸಂಡೂರು ತಾಲ್ಲೂಕು** | | |
| 7 | ಬಸಾಪುರ | 881.33 | ಪೂರ್ಣ ಕಂದಾಯ ಗ್ರಾಮ |
| 8 | ಕುರೇಕುಪ್ಪ | 2165.70 | ಪೂರ್ಣ ಕಂದಾಯ ಗ್ರಾಮ |
| 9 | ದರೋಜಿ | 3973.66 | ಪೂರ್ಣ ಕಂದಾಯ ಗ್ರಾಮ |
| 10 | ತೋರಣಗಲ್ಲು | 2505.47 | ಪೂರ್ಣ ಕಂದಾಯ ಗ್ರಾಮ |
| 11 | ವಡ್ಡು | 1300.71 | ಪೂರ್ಣ ಕಂದಾಯ ಗ್ರಾಮ |
| 12 | ಜೋಗ | 2337.04 | ಪೂರ್ಣ ಕಂದಾಯ ಗ್ರಾಮ |
| 13 | ನಾಗಲಾಪುರ | 454.13 | ಪೂರ್ಣ ಕಂದಾಯ ಗ್ರಾಮ |
| 14 | ಬನ್ನಿಹಟ್ಟಿ | 765.72 | ಪೂರ್ಣ ಕಂದಾಯ ಗ್ರಾಮ |
| 15 | ಗಂಗಲಾಪುರ | 289.77 | ಪೂರ್ಣ ಕಂದಾಯ ಗ್ರಾಮ |
| 16 | ಗೌರಿಪುರ | 235.81 | ಪೂರ್ಣ ಕಂದಾಯ ಗ್ರಾಮ |
| 17 | ಮುರಾರಿಪುರ | 293.50 | ಪೂರ್ಣ ಕಂದಾಯ ಗ್ರಾಮ |
| 18 | ಸಂಕರಪುರ | 100.64 | ಪೂರ್ಣ ಕಂದಾಯ ಗ್ರಾಮ |
| 19 | ದೌಲತ್‌ಪುರ | 890.95 | ಪೂರ್ಣ ಕಂದಾಯ ಗ್ರಾಮ |
| 20 | ಕೃಷ್ಣಾನಗರ | 583.44 | ಪೂರ್ಣ ಕಂದಾಯ ಗ್ರಾಮ |
| 21 | ಸಂಡೂರು (ಗ್ರಾಮ) | 739.40 | ಪೂರ್ಣ ಕಂದಾಯ ಗ್ರಾಮ |
| 22 | ಲಕ್ಷ್ಮೀಪುರ | 434.47 | ಪೂರ್ಣ ಕಂದಾಯ ಗ್ರಾಮ |
| 23 | ಧರ್ಮಪುರಿ | 336.01 | ಪೂರ್ಣ ಕಂದಾಯ ಗ್ರಾಮ |
| 24 | ಹುಲಿಕುಂಟ | 2202.63 | ಪೂರ್ಣ ಕಂದಾಯ ಗ್ರಾಮ |
| 25 | ಭುಜಗನಗರ (ಹೊಸಳ್ಳಿ) | 625.94 | ಪೂರ್ಣ ಕಂದಾಯ ಗ್ರಾಮ |
| 26 | ರಂಜಿತ್‌ಪುರ | 209.69 | ಪೂರ್ಣ ಕಂದಾಯ ಗ್ರಾಮ |
| 27 | ನರಸಿಂಗಪುರ | 137.60 | ಪೂರ್ಣ ಕಂದಾಯ ಗ್ರಾಮ |
| 28 | ಕೂಡಾಳು | 21381.03 | ಪೂರ್ಣ ಕಂದಾಯ ಗ್ರಾಮ |
| 29 | ಚಿಕ್ಕಂತಾಪುರ | 1437.37 | ಪೂರ್ಣ ಕಂದಾಯ ಗ್ರಾಮ |
| 30 | ಎರಬನಹಳ್ಳಿ | 1251.78 | ಪೂರ್ಣ ಕಂದಾಯ ಗ್ರಾಮ |
| 31 | ಮುಸೇನಾಯಕನಹಳ್ಳಿ | 305.95 | ಪೂರ್ಣ ಕಂದಾಯ ಗ್ರಾಮ |

| ಕ್ರಮ ಸಂಖ್ಯೆ | ಗ್ರಾಮಗಳ ಹೆಸರು | ಒಟ್ಟು ವಿಸ್ತೀರ್ಣ ಹೆಕ್ಟೇರ್‌ಗಳಲ್ಲಿ | ಷರಾ |
|---|---|---|---|
| 32 | ತಾಳೂರು | 1361.01 | ಪೂರ್ಣ ಕಂದಾಯ ಗ್ರಾಮ |
| 33 | ಅಂತಾಪುರ | 1139.82 | ಬ.ನ.ಪ್ರಾ.ದ ವ್ಯಾಪ್ತಿಯ ಹೊರಗೆ ಬರುತ್ತದೆ |
| 34 | ತಾರಾನಗರ | 983.67 | ಪೂರ್ಣ ಕಂದಾಯ ಗ್ರಾಮ |
| | **ಹೊಸಪೇಟೆ** | | |
| 35 | ಗೋನಾಳು | 718.02 | ಪೂರ್ಣ ಕಂದಾಯ ಗ್ರಾಮ |
| 36 | ಭುವನಹಳ್ಳಿ | 297.90 | ಪೂರ್ಣ ಕಂದಾಯ ಗ್ರಾಮ |
| 37 | ಕಾಕುಬಾಳು | 1991.90 | ಪೂರ್ಣ ಕಂದಾಯ ಗ್ರಾಮ |
| 38 | ಗುಂಡಲವದ್ದಿಗೇರಿ | 628.94 | ಪೂರ್ಣ ಕಂದಾಯ ಗ್ರಾಮ |
| 39 | ಧರ್ಮಸಾಗರ | 1316.85 | ಪೂರ್ಣ ಕಂದಾಯ ಗ್ರಾಮ |
| 40 | ಕೊಟಗಿನಹಾಳು | 1047.99 | ಪೂರ್ಣ ಕಂದಾಯ ಗ್ರಾಮ |
| 41 | ಗಾದಿಗನೂರು | 1457.79 | ಪೂರ್ಣ ಕಂದಾಯ ಗ್ರಾಮ |
| 42 | ಬೈಲುವದ್ದಿಗೇರಿ | 1103.05 | ಪೂರ್ಣ ಕಂದಾಯ ಗ್ರಾಮ |
| 43 | ಹೊನ್ನಹಳ್ಳಿ | 571.06 | ಹೊ.ನ.ಪ್ರಾ.ದ ವ್ಯಾಪ್ತಿಯ ಹೊರಗೆ ಬರುತ್ತದೆ. |

**ಸಿ.ಟಿ. ನಾರಾಯಣಸ್ವಾಮಿ**
ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ

**ವಿಜಯನಗರ ಸ್ಥಳೀಯ ಯೋಜನಾ ಪ್ರದೇಶದ ಸರಹದ್ದಿನ ವಿವರ**

**ಅನುಬಂಧ–2**

ವಿಜಯನಗರ ಸ್ಥಳೀಯ ಯೋಜನಾ ಪ್ರದೇಶದ ಸರಹದ್ದು ಬಳ್ಳಾರಿ ತಾಲ್ಲೂಕು ಸಿದ್ದಮನಹಳ್ಳಿ ಗ್ರಾಮದ ಪೂರ್ವದಿಂದ ದಕ್ಷಿಣಾಭಿಮುಖವಾಗಿ ದೇಣಿವೀರಾಪುರ ಗ್ರಾಮದ ಗಡಿಯನ್ನು ದಾಟಿ ಹರಗಿನದೋಣಿ ಗ್ರಾಮದ ಗಡಿಯನ್ನು ತಲುಪಿ ವಾಯುವ್ಯದ ದಿಕ್ಕಿನಲ್ಲಿ ಚಲಿಸಿ, ನಂತರ ಸಂಡೂರು ತಾಲ್ಲೂಕಿನ ಅಂತಾಪುರ ಗ್ರಾಮದ ಮುಖಾಂತರ ಕೊಡಲು ಗ್ರಾಮ, ತಾರಾನಗರ ತಲುಪಿ ನಂತರ ದಕ್ಷಿಣಾಭಿಮುಖವಾಗಿ ಸಂಡೂರು ತಾಲ್ಲೂಕು ಭುಜಂಗನಗರ ಗ್ರಾಮವನ್ನು ತಲುಪಿ ನಂತರ ಉತ್ತರಾಭಿಮುಖವಾಗಿ ಚಲಿಸಿ ಸಂಡೂರು ತಾಲ್ಲೂಕು ಲಕ್ಷ್ಮೀಪುರ, ಮುಖಾಂತರ ಚಲಿಸಿ, ಧರ್ಮಪೂರ, ಸಂಡೂರು, ದೌಲತ್‌ಪುರ ಗ್ರಾಮವನ್ನು ತಲುಪಿ ಪೂರ್ವಾಭಿಮುಖವಾಗಿ ನಂತರ ಉತ್ತರಾಭಿಮುಖವಾಗಿ ಮುರಾರಿಪುರ, ಗೌರಿಪುರ ಹಾಗೂ ಗಂಗಲಾಪುರ ಜೋಗ ಮುರಾರಿಪುರ ತೆರಳು ಗ್ರಾಮವನ್ನು ತಲುಪಿ ನಂತರ ಉತ್ತರಾಭಿಮುಖವಾಗಿ ಚಲಿಸಿ ಹೊಸಪೇಟೆ ತಾಲ್ಲೂಕು ಕಾಕುಬಾಳು, ಗುಂದಲವಡ್ಡಿಕೇರಿ, ಬಯಲುವಡ್ಡಿಕೇರಿ ತಲುಪಿ ಪೂರ್ವಾಭಿಮುಖವಾಗಿ ಚಲಿಸಿ ಹೊಸಪೇಟೆ ತಾಲ್ಲೂಕು ಕಾಕುಬಾಳು, ಗುಂದಲವಡ್ಡಿಕೇರಿ, ಬಯಲುವಡ್ಡಿಕೇರಿ ತಲುಪಿ ಪೂರ್ವಾಭಿಮುಖವಾಗಿ ಚಲಿಸುತ್ತಾ ಧರ್ಮಸಾಗರ, ಅಡಿಗನೂರು, ಗೋನಹಾಳು, ದರೋಜಿ, ಹೊಸಹಳ್ಳಿ ಗ್ರಾಮಗಳ ಗಡಿಯ ಮುಖಾಂತರ ಚಲಿಸಿ ಬಳ್ಳಾರಿ ತಾಲ್ಲೂಕು ಯಲುಬೆಂಚಿ ಹಾಗೂ ಸಿದ್ದಮನಹಳ್ಳಿ ಗಡಿಯನ್ನು ಸೇರುತ್ತದೆ.

**ಸಿ.ಟಿ. ನಾರಾಯಣಸ್ವಾಮಿ**
ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ

**ಅನುಬಂಧ–3**

**ಬಳ್ಳಾರಿ–ಸಂಡೂರು ಸ್ಥಳೀಯ ಯೋಜನಾ ಪ್ರದೇಶದಿಂದ ಕೈಬಿಡಬೇಕಾದ ಗ್ರಾಮಗಳ ಯಾದಿ**

| ಕ್ರಮ ಸಂಖ್ಯೆ | ಗ್ರಾಮಗಳ ಹೆಸರು | ಒಟ್ಟು ವಿಸ್ತೀರ್ಣ ಹೆಕ್ಟೇರ್‌ಗಳಲ್ಲಿ | ಷರಾ |
|---|---|---|---|
| | **ಬಳ್ಳಾರಿ ತಾಲ್ಲೂಕು** | | |
| 1 | ವೇಣಿ ವೀರಾಪುರ | 2521.77 | ಪೂರ್ಣ ಕಂದಾಯ ಗ್ರಾಮ |
| 2 | ತಿಮ್ಮಾಪುರ | 1582.44 | ಪೂರ್ಣ ಕಂದಾಯ ಗ್ರಾಮ |
| 3 | ಕುಡಿತಿನಿ | 7833.00 | ಪೂರ್ಣ ಕಂದಾಯ ಗ್ರಾಮ |
| 4 | ಹರಗಿನದೋಣಿ | 2090.49 | ಪೂರ್ಣ ಕಂದಾಯ ಗ್ರಾಮ |
| | **ಸಂಡೂರು ತಾಲ್ಲೂಕು** | | |
| 5 | ಬಸಾಪುರ | 881.33 | ಪೂರ್ಣ ಕಂದಾಯ ಗ್ರಾಮ |
| 6 | ಕರೇಕುಪ್ಪ | 2165.70 | ಪೂರ್ಣ ಕಂದಾಯ ಗ್ರಾಮ |

| ಕ್ರಮ ಸಂಖ್ಯೆ | ಗ್ರಾಮಗಳ ಹೆಸರು | ಒಟ್ಟು ವಿಸ್ತೀರ್ಣ ಹೆಕ್ಟೇರ್‌ಗಳಲ್ಲಿ | ಷರಾ |
|---|---|---|---|
| 7 | ದರೋಜಿ | 3973.66 | ಪೂರ್ಣ ಕಂದಾಯ ಗ್ರಾಮ |
| 8 | ತೋರಣಗಲ್ಲು | 2505.47 | ಪೂರ್ಣ ಕಂದಾಯ ಗ್ರಾಮ |
| 9 | ವಡ್ಡು | 1300.71 | ಪೂರ್ಣ ಕಂದಾಯ ಗ್ರಾಮ |
| 10 | ಜೋಗ | 2337.04 | ಪೂರ್ಣ ಕಂದಾಯ ಗ್ರಾಮ |
| 11 | ನಾಗಲಾಪುರ | 454.13 | ಪೂರ್ಣ ಕಂದಾಯ ಗ್ರಾಮ |
| 12 | ಬನ್ನಿಹಟ್ಟಿ | 765.72 | ಪೂರ್ಣ ಕಂದಾಯ ಗ್ರಾಮ |
| 13 | ಗಂಗಲಾಪುರ | 289.77 | ಪೂರ್ಣ ಕಂದಾಯ ಗ್ರಾಮ |
| 14 | ಗೌರಿಪುರ | 235.81 | ಪೂರ್ಣ ಕಂದಾಯ ಗ್ರಾಮ |
| 15 | ಮುರಾರಿಪುರ | 293.50 | ಪೂರ್ಣ ಕಂದಾಯ ಗ್ರಾಮ |
| 16 | ಸಂಕನಪುರ | 100.64 | ಪೂರ್ಣ ಕಂದಾಯ ಗ್ರಾಮ |
| 17 | ದೌಲತ್‌ಪುರ | 890.95 | ಪೂರ್ಣ ಕಂದಾಯ ಗ್ರಾಮ |
| 18 | ಕೃಷ್ಣಾನಗರ | 583.44 | ಪೂರ್ಣ ಕಂದಾಯ ಗ್ರಾಮ |
| 19 | ಸಂಡೂರು (ಗ್ರಾಮ) | 739.040 | ಪೂರ್ಣ ಕಂದಾಯ ಗ್ರಾಮ |
| 20 | ಲಕ್ಷ್ಮೀಪುರ | 434.47 | ಪೂರ್ಣ ಕಂದಾಯ ಗ್ರಾಮ |
| 21 | ಧರ್ಮಪುರ | 336.01 | ಪೂರ್ಣ ಕಂದಾಯ ಗ್ರಾಮ |
| 22 | ಹುಲಿಕುಂಟ | 2202.63 | ಪೂರ್ಣ ಕಂದಾಯ ಗ್ರಾಮ |
| 23 | ಭುಜಗನಗರ (ಹೊಸಳ್ಳಿ) | 625.94 | ಪೂರ್ಣ ಕಂದಾಯ ಗ್ರಾಮ |
| 24 | ರಂಜಿತ್‌ಪುರ | 209.69 | ಪೂರ್ಣ ಕಂದಾಯ ಗ್ರಾಮ |
| 25 | ನರಸಿಂಗಪುರ | 137.60 | ಪೂರ್ಣ ಕಂದಾಯ ಗ್ರಾಮ |
| 26 | ಕೂಡಲ್ | 21381.03 | ಪೂರ್ಣ ಕಂದಾಯ ಗ್ರಾಮ |
| 27 | ಚಿಕ್ಕಂತಾಪುರ | 1437.37 | ಪೂರ್ಣ ಕಂದಾಯ ಗ್ರಾಮ |
| 28 | ಎರಗನಹಳ್ಳಿ | 1251.78 | ಪೂರ್ಣ ಕಂದಾಯ ಗ್ರಾಮ |
| 29 | ಮುಸೇನಾಯಕನಹಳ್ಳಿ | 305.95 | ಪೂರ್ಣ ಕಂದಾಯ ಗ್ರಾಮ |
| 30 | ತಾಳೂರು | 1361.01 | ಪೂರ್ಣ ಕಂದಾಯ ಗ್ರಾಮ |
| 31 | ತಾರಾನಗರ | 983.67 | ಪೂರ್ಣ ಕಂದಾಯ ಗ್ರಾಮ |

**ಸಿ.ಟಿ. ನಾರಾಯಣಸ್ವಾಮಿ**

ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ

**ಅನುಬಂಧ–4**

**ಹೊಸಪೇಟೆ ಸ್ಥಳೀಯ ಯೋಜನಾ ಪ್ರದೇಶದಿಂದ ಕೈಬಿಡಬೇಕಾದ ಗ್ರಾಮಗಳ ಯಾದಿ**

| | | | |
|---|---|---|---|
| 1 | ಗೋನಹಾಳು | 718.02 | ಪೂರ್ಣ ಕಂದಾಯ ಗ್ರಾಮ |
| 2 | ಭುವನಹಳ್ಳಿ | 297.01 | ಪೂರ್ಣ ಕಂದಾಯ ಗ್ರಾಮ |
| 3 | ಕಾಕುಬಾಳು | 1991.90 | ಪೂರ್ಣ ಕಂದಾಯ ಗ್ರಾಮ |
| 4 | ಗುಂಡಲವಡ್ಡಗಿರಿ | 628.94 | ಪೂರ್ಣ ಕಂದಾಯ ಗ್ರಾಮ |
| 5 | ಧರ್ಮಸಾಗರ | 1316.85 | ಪೂರ್ಣ ಕಂದಾಯ ಗ್ರಾಮ |
| 6 | ಕೊಟ್ಟಿಗೇನಹಳ್ಳಿ | 1047.99 | ಪೂರ್ಣ ಕಂದಾಯ ಗ್ರಾಮ |
| 7 | ಗಡಿಗನೂರು | 1457.79 | ಪೂರ್ಣ ಕಂದಾಯ ಗ್ರಾಮ |
| 8 | ಬೈಲುವಡ್ಡಿಗೇರಿ | 1103.05 | ಪೂರ್ಣ ಕಂದಾಯ ಗ್ರಾಮ |

**ಸಿ.ಟಿ. ನಾರಾಯಣಸ್ವಾಮಿ**

ಪಿ.ಆರ್.1699 ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ

**ಒಳಾಡಳಿತ ಸಚಿವಾಲಯ**

**ವಿಷಯ :** ಶ್ರೀ ಕೆ.ಎಸ್. ಆಡಿ, ನಿವೃತ್ತ ಎಸ್.ಪಿ ಮತ್ತು ಇತರರ ವಿರುದ್ಧ ಜಂಟಿ ಇಲಾಖಾ ವಿಚಾರಣೆಯಲ್ಲಿ ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ಒಇ 258 ಪೊಸಿಪ 2007, ದಿನಾಂಕ 24-9-2007.
2. ವಿಚಾರಣಾಧಿಕಾರಿಗಳು ವಿಚಾರಣಾ ವರದಿ ದಿನಾಂಕ 5-9-2008.
3. ಡಿಜಿ ಮತ್ತು ಐಜಿಪಿ ರವರ ಪತ್ರ ಸಂಖ್ಯೆ: ಸಿಬಿ(5)40/2006-07, ದಿನಾಂಕ 17-9-2008.

**ಪ್ರಸ್ತಾವನೆ :**

ಮೇಲೆ 1ರಲ್ಲಿ ಓದಲಾದ ಆದೇಶದಲ್ಲಿ ಬೆಳಗಾಂ ಜಿಲ್ಲಾ ಮಹಿಳಾ ಪೊಲೀಸ್ ಠಾಣೆಯಲ್ಲಿ ದಾಖಲಾದ ಮೊಕದ್ದಮೆ ಸಂಖ್ಯೆ: 1/06 ಕಲಂ 498(ಎ), 304(ಬಿ) 306 ರೆ/ವಿ 34 ಐಪಿಸಿ ಮತ್ತು 3, 4 & 6 ಡಿಪಿ ಕಾಯ್ದೆ ಪ್ರಕರಣದಲ್ಲಿ ಸಮರ್ಪಕ ತನಿಖೆ ಮಾಡದೇ ಲೋಪವೆಸಗಿರುವುದು ಆಪಾದಿತ ಪೊಲೀಸ್ ಅಧಿಕಾರಿಗಳಾದ ಶ್ರೀಮತಿ ಗೌರಮ್ಮ ಶಿವಲಿಂಗಪ್ಪ ಹೇರವಾಡ, ಮಹಿಳಾ ಪಿ.ಎಸ್.ಐ. ಹಾಲಿ ಮಹಿಳಾ ಪಿ.ಐ., ಡಿ.ಸಿ.ಆರ್.ಇ., ಬೆಳಗಾಂ ಶ್ರೀ ಕೆ. ನಾಗರಾಜ, ಪೊಲೀಸ್ ಇನ್ಸ್‌ಪೆಕ್ಟರ್, ಹಾಲಿ ನಗರ ವಿಶೇಷ ಶಾಖೆ, ಬೆಂಗಳೂರು, ಶ್ರೀ ಎನ್.ವಿ. ಬರಮನಿ, ಪೊಲೀಸ್ ಇನ್ಸ್‌ಪೆಕ್ಟರ್ ರವರುಗಳ ವಿರುದ್ಧ ಕೆ.ಎಸ್.ಪಿ. (ಡಿ.ಪಿ.) ನಿಯಮಗಳು, 1965/89ರ ನಿಯಮ 6 ಉಪ ನಿಯಮ 2 ಮತ್ತು 8ರನ್ವಯ ಜಂಟಿ ಇಲಾಖಾ ವಿಚಾರಣೆಗೆ ಮತ್ತು ಶ್ರೀ ಕೆ.ಎಸ್. ಆಡಿ, ನಿವೃತ್ತ ಎಸ್.ಪಿ. ರವರ ವಿರುದ್ಧ ಕೆ.ಸಿ.ಎಸ್.ಆರ್. ನಿಯಮ 214(ಎ)ರ ಪ್ರಕಾರ ಇಲಾಖಾ ವಿಚಾರಣೆಗೆ ಆದೇಶಿಸಲಾಗಿತ್ತು.

ಮೇಲೆ (2)ರಲ್ಲಿ ಓದಲಾದ ವರದಿಯಲ್ಲಿ ವಿಚಾರಣಾಧಿಕಾರಿಗಳು ಅಭಿಯೋಗದ ಪರವಾಗಿ 15 ಸಾಕ್ಷಿಗಳನ್ನು ಹಾಗೂ 9 ದಾಖಲಾತಿಗಳನ್ನು ಪರಿಶೀಲಿಸಿ ವಿವರವಾದ ವರದಿಯನ್ನು ನೀಡಿದ್ದು ವರದಿಯಲ್ಲಿ ಚರ್ಚಿಸಿರುವ ಕಾರಣಗಳಿಂದಾಗಿ ಹಾಗೂ ಈ ಪ್ರಕರಣದಲ್ಲಿ ಆರೋಪಿತ ಪೊಲೀಸ್ ಅಧಿಕಾರಿಗಳು ಪ್ರಕರಣವನ್ನು ಕಲಂ 304(ಬಿ)ರ ಅಡಿಯಲ್ಲಿ ದಾಖಲು ಮಾಡದೆ ಕಲಂ 498(ಎ), 306 ಐಪಿಸಿ ಅಡಿಯಲ್ಲಿ ದಾಖಲು ಮಾಡಿರುವ ದೋಷಾರೋಪಣೆ ಮಾಡಲಾಗಿದೆ. ಆದರೆ, ವಿವಾಹ ಪೂರ್ವದಲ್ಲಿ ಮೃತಳ ಗಂಡನ ಮನೆಯವರು ವಿವಾಹಕ್ಕೆ ಮೊದಲು 1.00 ಲಕ್ಷ ರೂ.ಗಳನ್ನು ಕೊಡುವ ಒಪ್ಪಂದ ಆಗಿರಲಿಲ್ಲವೆಂದು ಮದುವೆಯಾದ 7 ತಿಂಗಳ ನಂತರ ಸೈಕಲ್ ಅಂಗಡಿಗಾಗಿ 1.00 ಲಕ್ಷ ರೂ.ಗಳನ್ನು ಕೇಳಿದ್ದು, ಅದನ್ನು ಕೊಡದಿದ್ದುದರ ಹಿನ್ನಲೆಯಲ್ಲಿ ಮೃತ ಮಹಿಳೆಗೆ ಕಿರುಕುಳ ನೀಡಿದ ಪ್ರಯುಕ್ತ ಮಹಿಳೆಯು ವಿಷ ಸೇವಿಸಿರುತ್ತಾರೆಂದು ತನಿಖೆಯಿಂದ ಸಾಬೀತಾಗಿರುವುದರಿಂದ ಮತ್ತು ಮಹಿಳೆಯ ಮರಣಕ್ಕೆ ಕಾರಣರಾದ ಆರೋಪಿತರಿಗೆ ನ್ಯಾಯಾಲಯ ಕಲಂ 306 ರಡಿಯಲ್ಲಿ ಶಿಕ್ಷೆಯನ್ನು ನೀಡಿರುವುದಾಗಿ ವಿಚಾರಣಾ ವರದಿಯಿಂದ ಕಂಡು ಬರುವುದರಿಂದ ಮತ್ತು ಪೊಲೀಸ್ ಅಧಿಕಾರಿಗಳು ತಮ್ಮ ಕರ್ತವ್ಯವನ್ನು ಮಾಡಿರುವುದಾಗಿ ವಿಚಾರಣೆಯಲ್ಲಿ ಕಂಡುಬಂದಿದೆ ಎಂದು ಆರೋಪಿತ ಅಧಿಕಾರಿಗಳ ವಿರುದ್ಧ ಮಾಡಲಾಗಿರುವ ಆರೋಪಗಳು ಸಾಬೀತಾಗಿರುವುದಿಲ್ಲ ಎಂದು ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾವನೆ ಪರಿಶೀಲಿಸಿದೆ. ವಿಚಾರಣಾಧಿಕಾರಿಗಳ ಅಭಿಪ್ರಾಯದ ಹಿನ್ನೆಲೆಯಲ್ಲಿ ಆರೋಪಿತ ಅಧಿಕಾರಿಗಳ ವಿರುದ್ಧದ ದೋಷಾರೋಪಣೆಗಳಿಂದ ಮುಕ್ತಾಯಗೊಳಿಸಲು ಸರ್ಕಾರವು ತೀರ್ಮಾನಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 258 ಪೊಸಿಪ 2007, ಬೆಂಗಳೂರು, ದಿನಾಂಕ: 2ನೇ ಡಿಸೆಂಬರ್ 2008.**

ಶ್ರೀಮತಿ ಗೌರಮ್ಮ ಶಿವಲಿಂಗಪ್ಪ ಹೇರವಾಡ, ಮಹಿಳಾ ಪಿ.ಎಸ್.ಐ. ಹಾಲಿ ಮಹಿಳಾ ಪಿ.ಐ., ಡಿ.ಸಿ.ಆರ್.ಇ., ಬೆಳಗಾಂ ಶ್ರೀ ಕೆ. ನಾಗರಾಜ, ಪೊಲೀಸ್ ಇನ್ಸ್‌ಪೆಕ್ಟರ್, ಹಾಲಿ ನಗರ ವಿಶೇಷ ಶಾಖೆ, ಬೆಂಗಳೂರು, ಶ್ರೀ ಎನ್.ವಿ. ಬರಮನಿ, ಪೊಲೀಸ್ ಇನ್ಸ್‌ಪೆಕ್ಟರ್ ಹಾಲಿ ಅಥಣಿ ವೃತ್ತ, ಬೆಳಗಾಂ ಜಿಲ್ಲೆ, ಶ್ರೀ ಕೆ.ಎಸ್. ಆಡಿ, ನಿವೃತ್ತ ಎಸ್.ಪಿ. ರವರುಗಳನ್ನು ದೋಷಮುಕ್ತರನ್ನಾಗಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.93 **ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**ವಿಷಯ :** ಶ್ರೀ ಎಫ್.ಬಿ. ಚವ್ಹಾಣ್, ಡಿವೈ.ಎಸ್.ಪಿ. ಹಿಂದೆ ಧಾರವಾಡ ಗ್ರಾಮೀಣ ಉಪ ವಿಭಾಗ ಧಾರವಾಡ ಜಿಲ್ಲೆ ರವರ ವಿರುದ್ಧ ಶಿಸ್ತು ಕ್ರಮ ಜರುಗಿಸುವ ಬಗ್ಗೆ.

**ಓದಲಾಗಿದೆ:** ಡಿಜಿ ಮತ್ತು ಐಜಿಪಿ, ಬೆಂಗಳೂರು ರವರ ಪತ್ರ ಸಂಖ್ಯೆ: ಸಿಬಿ(5)18/2008-09, ದಿನಾಂಕ 18-11-2008.

**ಪ್ರಸ್ತಾವನೆ :**

ಶ್ರೀ ಎಫ್.ಬಿ. ಚವ್ಹಾಣ್, ಡಿವೈ.ಎಸ್.ಪಿ. ರವರ ಶಾಲಾ ದಾಖಲಾತಿಗಳ ಪ್ರಕಾರ ಜನ್ಮ ದಿನಾಂಕ 10-7-1952 ಆಗಿದ್ದು ದಿನಾಂಕ 5-11-1977ರಲ್ಲಿ ಪಿ.ಎಸ್.ಐ. ಆಗಿ ಪೊಲೀಸ್ ಇಲಾಖೆಯಲ್ಲಿ ಕರ್ತವ್ಯಕ್ಕೆ ಹಾಜರಾಗಿರುತ್ತಾರೆ. ಇವರು 1-4-1998

– 31–3–1999ರ ನಂತರದ ವರ್ಷಗಳಲ್ಲಿನ ವಾರ್ಷಿಕ ಕಾರ್ಯ ನಿರ್ವಹಣಾ ವರದಿಗಳಲ್ಲಿ ಜನ್ಮ ದಿನಾಂಕವನ್ನು 10–7–1954 ಎಂದು ತಿದ್ದುಪಡಿ ಮಾಡಿ ನಂತರದ ವರ್ಷಗಳಲ್ಲಿ 10–7–1954 ಎಂದು ಸ್ವತಃ ಸ್ಪಷ್ಟವಾಗಿ ನಮೂದಿಸಿಕೊಂಡು ಬಂದಿರುತ್ತಾರೆ. ಇದು ಸರ್ಕಾರಕ್ಕೆ ಮೋಸ ಮಾಡಲು ಮಾಡಿದ ಪ್ರಯತ್ನವಾಗಿದೆ ಹಾಗೂ ಇವರ ಸೇವಾ ಪುಸ್ತಕದಲ್ಲೂ ಸಹಾ ತಿದ್ದುಪಡಿ ಮಾಡಲು ಇವರೇ ಹೊಣೆಗಾರರಾಗಿರುತ್ತಾರೆಂದು, ಸರ್ಕಾರದ ಸೇವೆಯಲ್ಲಿದ್ದು ಈ ರೀತಿ ಕರ್ತವ್ಯದಲ್ಲಿ ದುರ್ನಡತೆ ಪ್ರದರ್ಶಿಸಿ ಸರ್ಕಾರಕ್ಕೆ ಮೋಸ ಮಾಡಲು ಪ್ರಯತ್ನಿಸಿರುವುದು ಕಂಡು ಬಂದಿರುವುದರಿಂದ ಇವರ ವಿರುದ್ಧ ಕೆ.ಎಸ್.ಪಿ. (ಡಿ.ಪಿ) ನಿಯಮಗಳು, 1965ರ ನಿಯಮ 6 ರಡಿಯಲ್ಲಿ ಇಲಾಖಾ ವಿಚಾರಣೆಗೆ ಆದೇಶಿಸಲು ಹಾಗೂ ಪೊಲೀಸ್ ಆಯುಕ್ತರು ಹುಬ್ಬಳ್ಳಿ–ಧಾರವಾಡ ನಗರ ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲು ಡಿಜಿ ಮತ್ತು ಐಜಿಪಿ ರವರು ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಸರ್ಕಾರದ ಹಿರಿಯ ಅಧಿಕಾರಿಯಾಗಿದ್ದು ಸರ್ಕಾರಕ್ಕೆ ಮೋಸ ಮಾಡಿರುವುದರ ಮೂಲಕ ಈ ರೀತಿ ವೈಯಕ್ತಿಕ ಲಾಭಕ್ಕೋಸ್ಕರ ಸೇವಾ ಪುಸ್ತಕದಲ್ಲಿ ಜನ್ಮ ದಿನಾಂಕವನ್ನು ತಿದ್ದುಪಡಿ ಮಾಡಿ ತಪ್ಪು ಮಾಹಿತಿಗಳನ್ನು ನೀಡುತ್ತಿರುವುದು ಘೋರ ದುರ್ನಡತೆಯಾಗಿದ್ದು ಆರೋಪದ ಮೇಲಿನ ಸತ್ಯಾಸತ್ಯತೆಯನ್ನು ಪರಿಶೀಲಿಸಲು ಇವರ ವಿರುದ್ಧ ಕೆ.ಎಸ್.ಪಿ. (ಡಿ.ಪಿ.) ನಿಯಮಗಳು, 1965ರ ನಿಯಮ 6 ರಡಿಯಲ್ಲಿ ಇಲಾಖಾ ವಿಚಾರಣೆಗೆ ಆದೇಶಿಸುವ ಬಗ್ಗೆ ಸರ್ಕಾರವು ಪರಿಶೀಲಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 277 ಪೊಸಿಪ 2008, ಬೆಂಗಳೂರು, ದಿನಾಂಕ: 22ನೇ ಜನವರಿ 2009.**

ಪ್ರಸ್ತಾವನೆಯಲ್ಲಿ ವಿವರಿಸಿದ ಹಿನ್ನೆಲೆಯಲ್ಲಿ ಶ್ರೀ ಎಫ್.ಬಿ. ಚವ್ಹಾಣ್, ಡಿವೈ.ಎಸ್.ಪಿ. (ಈ ಹಿಂದೆ ಧಾರವಾಡ ಗ್ರಾಮೀಣ ಉಪ ವಿಭಾಗ ಧಾರವಾಡ) ಸಂಚಾರ ಉಪ ವಿಭಾಗ, ಹುಬ್ಬಳ್ಳಿ–ಧಾರವಾಡ ನಗರ ರವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು, 1965ರ ನಿಯಮ 6 ರಡಿಯಲ್ಲಿ ಇಲಾಖಾ ವಿಚಾರಣೆಯನ್ನು ನಡೆಸಲು ಆದೇಶಿಸಿದೆ. ಈ ಇಲಾಖೆ ವಿಚಾರಣೆ ನಡೆಸಲು ಪೊಲೀಸ್ ಆಯುಕ್ತರು, ಹುಬ್ಬಳ್ಳಿ–ಧಾರವಾಡ ನಗರ ರವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿದೆ.

ಈ ಸಂಬಂಧ ದೋಷಾರೋಪಣಾ ಪತ್ರವನ್ನು ಸಹ ಹೊರಡಿಸಲಾಗಿದೆ. ಈ ವಿಚಾರಣೆಯನ್ನು ನಿಯಮಾನುಸಾರ ನಡೆಸಿ 3 ತಿಂಗಳೊಳಗಾಗಿ ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಕಳುಹಿಸಿಕೊಡಲು ಸೂಚಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.439

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

## ನಗರಾಭಿವೃದ್ಧಿ ಸಚಿವಾಲಯ

**ವಿಷಯ :** ಬಳ್ಳಾರಿ ಜಿಲ್ಲೆ ಸಂಡೂರು ತಾಲ್ಲೂಕು ಬನ್ನಿಹಟ್ಟಿ ಗ್ರಾಮದ ಸರ್ವೆ ನಂ. 152.2 ರಲ್ಲಿನ 6.00 ಎಕರೆ ವಿಸ್ತೀರ್ಣದ ಜಮೀನನ್ನು ಕೃಷಿ ವಲಯದಿಂದ ಕೈಗಾರಿಕೆ (ಖನಿಜ ದಾಸ್ತಾಜು) ಉದ್ದೇಶಕ್ಕೆ ಭೂ ಉಪಯೋಗ ಬದಲಾವಣೆ ಮಾಡುವ ಬಗ್ಗೆ.

**ಓದಲಾಗಿದೆ:**

1. ಆಯುಕ್ತರು, ನಗರಾಭಿವೃದ್ಧಿ ಪ್ರಾಧಿಕಾರ, ಬಳ್ಳಾರಿ ಇವರ ಪತ್ರ ಸಂಖ್ಯೆ: ಬನಅಪ್ರಾ/ತಾಂತ್ರಿಕ/ ಭೂಬ/ ಕೈಗಾರಿಕೆ/15/2008–09/1913, ದಿ: 27–11–2008.
2. ನಿರ್ದೇಶಕರು, ನಗರ ಯೋಜನಾ ಇಲಾಖೆ ಇವರ ಏಕ ಕಡತ ಸಂಖ್ಯೆ: ನಯೋ/ಉನಿ/ಭೂಉಬ/ 145/ಬನ್ನಿಹಟ್ಟಿ/08–09, ದಿ: 11–12–2008ರಲ್ಲಿ ನೀಡಿರುವ ಅಭಿಪ್ರಾಯ.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ಆಯುಕ್ತರು, ನಗರಾಭಿವೃದ್ಧಿ ಪ್ರಾಧಿಕಾರ ಬಳ್ಳಾರಿ ರವರು ಬಳ್ಳಾರಿ ಜಿಲ್ಲೆ ಸಂಡೂರು ತಾಲ್ಲೂಕು ಬನ್ನಿಹಟ್ಟಿ ಗ್ರಾಮದ ಸರ್ವೆ ನಂ. 152:2 ರಲ್ಲಿನ 6.00 ಎಕರೆ ವಿಸ್ತೀರ್ಣದ ಜಮೀನನ್ನು ಕೃಷಿ ವಲಯದಿಂದ ಕೈಗಾರಿಕೆ (ಖನಿಜ ದಾಸ್ತಾಜು) ಉದ್ದೇಶಕ್ಕೆ ಭೂ ಉಪಯೋಗ ಬದಲಾವಣೆ ಮಾಡುವ ಕುರಿತು ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಕಲಂ 14(ಎ)ರನ್ವಯ ಸಾರ್ವಜನಿಕ ಆಕ್ಷೇಪಣೆಗಳನ್ನು ಆಹ್ವಾನಿಸಿ, ಪತ್ರಿಕಾ ಪ್ರಕಟಣೆಯನ್ನು ಶಿಫಾರಸ್ಸು ಮಾಡಿ ನಿರ್ದೇಶಕರು, ನಗರ ಯೋಜನಾ ಇಲಾಖೆ ಇವರ ಮುಖಾಂತರ ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಮೇಲೆ (2)ರಲ್ಲಿ ಓದಲಾದ ಕಡತದಲ್ಲಿ ನಗರ ಯೋಜನಾ ನಿರ್ದೇಶಕರು ಪ್ರಸ್ತಾವನೆಯನ್ನು ಪರಿಗಣಿಸಬಹುದೆಂದು ಶಿಫಾರಸ್ಸು ಮಾಡಿರುತ್ತಾರೆ.

**ಸರ್ಕಾರದ ಆದೇಶ ಸಂಖ್ಯೆ: ನಅಇ 436 ಬೆಮಪ್ರಾ 2008, ಬೆಂಗಳೂರು, ದಿನಾಂಕ: 23ನೇ ಡಿಸೆಂಬರ್ 2008.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಕಲಂ 14(1)(ಎ)ರ ಪ್ರಕಾರ ಬಳ್ಳಾರಿ ಜಿಲ್ಲೆ ಸಂಡೂರು ತಾಲ್ಲುಕು ಬನ್ನಿಹಟ್ಟಿ ಗ್ರಾಮದ ಸರ್ವೆ ನಂ. 152:2 ರಲ್ಲಿನ 6.00 ಎಕರೆ ವಿಸ್ತೀರ್ಣದ ಜಮೀನನ್ನು ಕೃಷಿ ವಲಯದಿಂದ ಕೈಗಾರಿಕೆ (ಖನಿಜ ದಾಸ್ತಾಜು) ಉದ್ದೇಶಕ್ಕೆ ಭೂ ಉಪಯೋಗ ಬದಲಾವಣೆ ಮಾಡಲು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಸರ್ಕಾರದ ಅನುಮೋದನೆ ನೀಡಲಾಗಿದೆ.

1. ಪ್ರಸ್ತಾಪಿತ ಜಮೀನಿನ ಭೂ ಉಪಯೋಗ ಬದಲಾವಣೆಗೆ, ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಪ್ರಕರಣ 18ರನ್ವಯ ನಿಗದಿತ ಶುಲ್ಕವನ್ನು ಬಳ್ಳಾರಿ ನಗರಾಭಿವೃದ್ಧಿ ಪ್ರಾಧಿಕಾರಕ್ಕೆ ಅರ್ಜಿದಾರರು ಪಾವತಿಸತಕ್ಕದ್ದು.
2. ಸದರಿ ಭೂ ಉಪಯೋಗ ಬದಲಾವಣೆಯನ್ನು ಮಹಾಯೋಜನೆ (ಪರಿಷ್ಕೃತ–1)ಯಲ್ಲಿ ಅಳವಡಿಸಿಕೊಳ್ಳತಕ್ಕದ್ದು.
3. ಅರ್ಜಿದಾರರು ಪ್ರಸ್ಥಾಪಿತ ಜಮೀನಿನಲ್ಲಿ ಯಾವುದೇ ಅಭಿವೃದ್ಧಿ ಕಾರ್ಯಗಳನ್ನು ಕೈಗೊಳ್ಳುವ ಮುನ್ನ ಅನುಮೋದಿತ ವಲಯ ನಿಯಮಾವಳಿಗಳನ್ವಯ ವಿನ್ಯಾಸಕ್ಕೆ ಬಳ್ಳಾರಿ ನಗರಾಭಿವೃದ್ಧಿ ಪ್ರಾಧಿಕಾರದಿಂದ ಅನುಮೋದನೆ ಪಡೆಯತಕ್ಕದ್ದು.
4. ರಾಜ್ಯ ಹೆದ್ದಾರಿ ನಿಯಮಾನುಸಾರ ರಸ್ತೆ, ವಿಸ್ತರಣೆಗೆ ಅಗತ್ಯ ಜಾಗ ಕಾಯ್ದಿರಿಸತಕ್ಕದ್ದು.
5. ಪರಿಸರ ಮಾಲಿನ್ಯ ನಿಯಂತ್ರಣ ಮಂಡಳಿ, ಇವರಿಂದ ನಿರಾಕ್ಷೇಪಣಾ ಪತ್ರ ಪಡೆಯತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.189

**ಸಿ.ಟಿ. ನಾರಾಯಣಸ್ವಾಮಿ**

ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಕರ್ನಾಟಕ ಸಮುದಾಯ ಆಧಾರಿತ ಕೆರೆ ನಿರ್ವಹಣೆ ಯೋಜನೆಗೆ 2008–09ನೇ ಸಾಲಿಗೆ ಮೊದಲ ಕಂತಿನ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** ಕಾರ್ಯನಿರ್ವಾಹಕ ನಿರ್ದೇಶಕರು, ಜಲಸಂವರ್ಧನೆ ಯೋಜನಾ ಸಂಘ, ಬೆಂಗಳೂರು ಇವರ ದಿ: 22–1–2008ರ ಪತ್ರ ಸಂಖ್ಯೆ: ಜೆ.ಎಸ್.ವೈ.ಎಸ್–ಬೆಂ/ಏಸಿಟಿ/68/2008–09.

**ಪ್ರಸ್ತಾವನೆ :**

ಜಲಸಂವರ್ಧನೆ ಯೋಜನಾ ಸಂಘವು ಕಾರ್ಯಗತಗೊಳಿಸುತ್ತಿರುವ ಕರ್ನಾಟಕ ಸಮುದಾಯ ಆಧಾರಿತ ಕೆರೆ ನಿರ್ವಹಣೆ ಯೋಜನೆಯ ಕಾರ್ಯಕ್ರಮಗಳಿಗೆ 2008–09ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ 4702–00–101–2–80 ಅಡಿ ರೂ. 240.00 ಕೋಟಿ ಅನುದಾನ ಒದಗಿಸಲಾಗಿದೆ. ಕಾರ್ಯನಿರ್ವಾಹಕ ನಿರ್ದೇಶಕರು, ಜಲಸಂವರ್ಧನೆ ಯೋಜನಾ ಸಂಘ, ಇವರು ಮೇಲೆ ಓದಲಾದ ಪತ್ರದಲ್ಲಿ 2008–09ನೇ ಸಾಲಿನಲ್ಲಿ 1680 ಕೆರೆಗಳನ್ನು ಪುನಃಶ್ಚೇತನ ಮಾಡುವ ಸಲುವಾಗಿ ಕಾಮಗಾರಿಗಳಿಗೆ, ಸಿಬ್ಬಂದಿ ಸಂಬಳ, ತರಬೇತಿ ಕಾರ್ಯಕ್ರಮ, ಸಲಹೆಗಾರರ ಸಂಭಾವನೆ, ಸರ್ಕಾರೇತರ ಸಂಸ್ಥೆಗಳಿಗೆ ಪಾವತಿಸಬೇಕಾದ ಮೊತ್ತಗಳು ಹಾಗೂ ಇತರೆ ವೆಚ್ಚಗಳು ಒಳಗೊಂಡಂತೆ ಒಟ್ಟು ರೂ. 100.00 ಕೋಟಿಗಳು ಅವಶ್ಯವಿರುತ್ತದೆ. ಆದುದರಿಂದ ಲೆಕ್ಕಶೀರ್ಷಿಕೆ 4702–00–101–2–80–139/422/423 ಅಡಿಯಲ್ಲಿ ರೂ. 100.00 ಕೋಟಿಗಳ ಅನುದಾನ ಬಿಡುಗಡೆ ಮಾಡಬೇಕೆಂದು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 13 ಜಸಂಯೋ 2008, ಬೆಂಗಳೂರು, ದಿನಾಂಕ: 5ನೇ ಜನವರಿ 2009.**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಕರ್ನಾಟಕ ಜಲಸಂವರ್ಧನೆ ಯೋಜನಾ ಸಂಘದ ಉದ್ದೇಶಿತ ಯೋಜನೆಗಳನ್ನು ಕಾರ್ಯಗತಗೊಳಿಸುವ ಸಲುವಾಗಿ 2008–09ನೇ ಸಾಲಿಗೆ ಲೆಕ್ಕಶೀರ್ಷಿಕೆ 4702–00–101–2–80 ಅಡಿಯಲ್ಲಿ ಒದಗಿಸಿರುವ ಅನುದಾನದ ಪೈಕಿ ಮೊದಲ ಕಂತಾಗಿ ರೂ. 50.00 ಕೋಟಿಗಳನ್ನು (ಐವತ್ತು ಕೋಟಿ ರೂಪಾಯಿಗಳು ಮಾತ್ರ) ಬಿಡುಗಡೆ ಮಾಡಿದೆ.

ಮುಂದಿನ ಕಂತಿನ ಹಣ ಬಿಡುಗಡೆಯ ಮುನ್ನ ಈಗ ಬಿಡುಗಡೆ ಮಾಡಲಾದ ಅನುದಾನದ Reimbursement Statement ಒದಗಿಸುವಂತೆ ಸೂಚಿಸಲಾಗಿದೆ. ಈಗ ಬಿಡುಗಡೆ ಮಾಡಿರುವ ಮೊತ್ತದ ಶೇ. 80ರಷ್ಟು ಮೊತ್ತವನ್ನು ಉಪಯೋಗಿಸಿಕೊಂಡ ನಂತರ ಮುಂದಿನ ಕಂತನ್ನು ಬಿಡುಗಡೆ ಮಾಡಲು ಪ್ರಸ್ತಾವನೆ ಸಲ್ಲಿಸುವುದು.

ಕಾರ್ಯನಿರ್ವಾಹಕ ನಿರ್ದೇಶಕರು, ಜಲಸಂವರ್ಧನೆ ಯೋಜನಾ ಸಂಘ ಬೆಂಗಳೂರು ರವರು ಹಣ ಸಂದಾಯ ಸ್ವೀಕೃತಿಯ ಮೇಲೆ ಸರ್ಕಾರದ ಉಪಕಾರ್ಯದರ್ಶಿಗಳು, ಜಲಸಂಪನ್ಮೂಲ ಇಲಾಖೆ, (ಸಣ್ಣ ನೀರಾವರಿ) ರವರಿಂದ ಮೇಲುರುಜು ಮಾಡಿಸಿಕೊಳ್ಳುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ದಿನಾಂಕ 24–12–2008ರ ಟಿಪ್ಪಣಿ ಸಂಖ್ಯೆ: ಲೋಇ 666 ಅಕೋ–1/2008ರಲ್ಲಿ ನೀಡಿರುವ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.380

**ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಕಂದಾಯ ಸಚಿವಾಲಯ

**ವಿಷಯ :** ಸದಸ್ಯರು, ಕರ್ನಾಟಕ ಮೇಲ್ಮನವಿ ನ್ಯಾಯಾಧೀಕರಣದ ಹುದ್ದೆಯನ್ನು ಮೇಲ್ದರ್ಜೆಗೇರಿಸುವ ಬಗ್ಗೆ.

**ಓದಲಾಗಿದೆ:** 1. ಅಧಿಸೂಚನೆ ಸಂಖ್ಯೆ: ಡಿಪಿಎಆರ್ 379 ಎಸ್‌ಎಎಸ್ 2008, ದಿನಾಂಕ 6–10–2008.

2. ಅನಧಿಕೃತ ಟಿಪ್ಪಣಿ ಸಂಖ್ಯೆ: ಡಿಪಿಎಆರ್ 454 ಎಸ್‌ಎಎಸ್ 2008, ದಿನಾಂಕ 4–12–2008.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮಸಂಖ್ಯೆ (1)ರ ಅಧಿಸೂಚನೆಯಲ್ಲಿ ಶ್ರೀ ಎನ್.ಎಂ. ವಿಜಯಕುಮಾರ್, ಭಾ.ಅ.ಸೇ., ಆಡಳಿತಾಧಿಕಾರಿ, ಕಾಡಾ (ಮಲಪ್ರಭಾ ಮತ್ತು ಘಟಪ್ರಭಾ ಯೋಜನೆ) ಬೆಳಗಾಂ ಇವರನ್ನು ಶ್ರೀ ಪರಮೇಶ್ ಪಾಂಡೆ, ಭಾ.ಆ.ಸೇ., ಸದಸ್ಯರು, ಕರ್ನಾಟಕ ಮೇಲ್ಮನವಿ ನ್ಯಾಯಧೀಕರಣ ಇವರ ವರ್ಗಾವಣೆಯಿಂದ ತೆರವಾದ ಜಾಗಕ್ಕೆ (ಮೇಲ್ದರ್ಜೆಗೇರಿಸಿ) ವರ್ಗಾಯಿಸಿ ಸ್ಥಳನಿಯುಕ್ತಿ ನೀಡಿ ನೇಮಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಅನಧಿಕೃತ ಟಿಪ್ಪಣಿಯಲ್ಲಿ ಸದಸ್ಯರು ಕರ್ನಾಟಕ ಮೇಲ್ಮನವಿ ನ್ಯಾಯಾಧೀಕರಣದ ಹುದ್ದೆಯನ್ನು ಮೇಲ್ದರ್ಜೆಗೇರಿಸಿ ಆದೇಶವನ್ನು ಹೊರಡಿಸುವಂತೆ ಕೋರಲಾಗಿದೆ.

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು–1)ಯ ಕೋರಿಕೆಯಂತೆ ಸದಸ್ಯರು, ಕರ್ನಾಟಕ ಮೇಲ್ಮನವಿ ನ್ಯಾಯಧೀಕರಣದ ಹುದ್ದೆಯನ್ನು ಅಧಿಸೂಚನೆ ಸಂಖ್ಯೆ: ಡಿಪಿಎಆರ್ 379 ಎಸ್‌ಎಎಸ್ 2008ರ ದಿನಾಂಕ 6–10–2008ರಿಂದ ಜಾರಿಗೆ ಬರುವಂತೆ ಮೇಲ್ದರ್ಜೆಗೇರಿಸಲು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 903 ಆರ್‌ಎಂಇ 2008, ಬೆಂಗಳೂರು, ದಿನಾಂಕ: 27ನೇ ಡಿಸೆಂಬರ್ 2008.**

ಕರ್ನಾಟಕ ಮೇಲ್ಮನವಿ ನ್ಯಾಯಾಧೀಕರಣ ಸದಸ್ಯರ ಹುದ್ದೆಯನ್ನು ದಿನಾಂಕ 6–10–2008 ರಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ Supertime Scale ನಿಂದ Above Supertime Scale ಹುದ್ದೆಯನ್ನಾಗಿ ಮೇಲ್ದರ್ಜೆಗೇರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.412

**ಟಿ. ಗಂಗಾಧರ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಕೆಎಟಿ ಮತ್ತು ಬಾನಿ)

**ವಿಷಯ :** ಶ್ರೀಮತಿ ಎಂ. ಕಲ್ಪನಾರಾವ್, ಸಹಾಯಕ ರಾಜ್ಯ ಪ್ರತಿನಿಧಿ (ತಹಶೀಲ್ದಾರ್ ಗ್ರೇಡ್–1) ರವರಿಗೆ ಸ್ಥಗಿತ ವೇತನ ಬಡ್ತಿ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:** 1. ಪ್ರಾದೇಶಿಕ ಆಯುಕ್ತರು, ಬೆಂಗಳೂರು ಇವರ ಪ್ರಸ್ತಾವನೆ ಸಂ: ಪ್ರಾಆಕ/ಸಿಬ್ಬಂದಿ(1):ಸಿಆರ್–392/07–08, ದಿನಾಂಕ 23–9–2008.

2. ಮಹಾಲೇಖಪಾಲರ ಪತ್ರ ಸಂ: ಜಿಇ–1/ಆರ್.3. Vol-1319/979, ದಿನಾಂಕ 17–9–2007.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಪ್ರಾದೇಶಿಕ ಆಯುಕ್ತರು, ಬೆಂಗಳೂರು ಇವರ ಪ್ರಸ್ತಾವನೆಯಲ್ಲಿ ಶ್ರೀಮತಿ ಎಂ. ಕಲ್ಪನಾ ರಾವ್, ಹಿಂದಿನ ತಹಶೀಲ್ದಾರ್, ಗ್ರೇಡ್–1 ಇವರು ವೇತನ ಶ್ರೇಣಿ ರೂ. 11400–21600ರಲ್ಲಿ ದಿನಾಂಕ 1–7–2005ರಂದು ಗರಿಷ್ಟ ಹಂತ ತಲುಪಿದ್ದು, ದಿನಾಂಕ 1–7–2006 ಹಾಗೂ 1–7–2007ರಂದು ಕ್ರಮವಾಗಿ ಮೊದಲನೇ ಹಾಗೂ ಎರಡನೇ ಸ್ಥಗಿತ ವೇತನ ಬಡ್ತಿಗಳನ್ನು ಪಡೆಯಲು ಅರ್ಹರಿರುವುದಾಗಿ ಇವರ ವಿರುದ್ಧ ಯಾವುದೇ ಶಿಸ್ತು ಕ್ರಮ ಪ್ರಕರಣಗಳು ಬಾಕಿ ಇರುವುದಿಲ್ಲ ಹಾಗೂ ಸೇವೆಯು ತೃಪ್ತಿಕರವಾಗಿರುವುದರಿಂದ ಮೇಲೆ (2)ರಲ್ಲಿ ಓದಲಾದ ಮಹಾಲೇಖಪಾಲರು ವರದಿ ಮಾಡಿದಂತೆ ವೇತನ ಶ್ರೇಣಿ ರೂ. 11,400–21,600 ರಲ್ಲಿ ದಿನಾಂಕ 1–7–2006 ರಂದು ಮೊದಲನೇ ಸ್ಥಗಿತ ವೇತನ ಬಡ್ತಿ ಹಾಗೂ 1–7–2007 ರಿಂದ ಎರಡನೇ ಸ್ಥಗಿತ ವೇತನ ಬಡ್ತಿ ಮಂಜೂರು ಮಾಡಬೇಕಾಗುತ್ತದೆ ಎಂದು ಸರ್ಕಾರವನ್ನು ಕೋರಿರುತ್ತಾರೆ.

ಸರ್ಕಾರವು ಪ್ರಾದೇಶಿಕ ಆಯುಕ್ತರು, ಬೆಂಗಳೂರು ಮತ್ತು ಮಹಾಲೇಖಪಾಲರ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ, ಶ್ರೀಮತಿ ಎಂ. ಕಲ್ಪನಾರಾವ್, ತಹಶೀಲ್ದಾರ್, ಗ್ರೇಡ್–1 ಇವರಿಗೆ ವೇತನ ಶ್ರೇಣಿ ರೂ. 11,400–21,600 ಗಳಲ್ಲಿ ದಿನಾಂಕ 1–7–2006 ರಂದು ಮೊದಲನೇ ಸ್ಥಗಿತ ವೇತನ ಬಡ್ತಿ ಹಾಗೂ ದಿನಾಂಕ 1–7–2007 ರಿಂದ ಎರಡನೇ ಸ್ಥಗಿತ ವೇತನ ಶ್ರೇಣಿ ಬಡ್ತಿ, ಬಡ್ತಿಗೆ ಅರ್ಹರಾಗಿರುವುದರಿಂದ ಸದರಿ ವೇತನ ಬಡ್ತಿಗಳನ್ನು ಮಂಜೂರು ಮಾಡಬೇಕಾಗಿರುವುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 01 ಎಎಸ್‌ಡಿ 2009, ಬೆಂಗಳೂರು, ದಿನಾಂಕ: 22ನೇ ಜನವರಿ 2009.**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳ ಹಿನ್ನೆಲೆಯಲ್ಲಿ, ಶ್ರೀಮತಿ ಎಂ. ಕಲ್ಪನಾರಾವ್, ತಹಶೀಲ್ದಾರ್, ಗ್ರೇಡ್–1 (ಪ್ರಸ್ತುತ ನಿವೃತ್ತ) ಇವರಿಗೆ ಈ ಕೆಳಕಂಡಂತೆ ಸ್ಥಗಿತ ವೇತನ ಬಡ್ತಿಗಳನ್ನು ಮಂಜೂರು ಮಾಡಲಾಗಿದೆ. ವೇತನ ಶ್ರೇಣಿ ರೂ. 11400–21600 ರಲ್ಲಿ 1) ದಿನಾಂಕ 1–7–2006 ರಿಂದ ಜಾರಿಗೆ ಬರುವಂತೆ ಮೊದಲನೇ ಸ್ಥಗಿತ ವೇತನ ಬಡ್ತಿ
2) ದಿನಾಂಕ 1–7–2007 ರಿಂದ ಜಾರಿಗೆ ಬರುವಂತೆ ಎರಡನೇ ಸ್ಥಗಿತ ವೇತನ ಬಡ್ತಿ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.411

**ಬಿ.ವಿ. ಚೌಕಿಮಠ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಸೇವೆಗಳು–3)

## ಸಹಕಾರ ಸಚಿವಾಲಯ

**ವಿಷಯ :** ದಿ ಐಡಿಯಲ್ ಹೋಮ್ಸ್ ಗೃಹ ನಿರ್ಮಾಣ ಸಹಕಾರ ಸಂಘ ನಿಯಮಿತ, ಬೆಂಗಳೂರು ಇವರ ವ್ಯವಹಾರಗಳ ಸಂಬಂಧ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 64ರ ವಿಚಾರಣೆ ಅವಧಿ ವಿಸ್ತರಿಸುವ ಬಗ್ಗೆ.

**ಓದಲಾಗಿದೆ:** ಸಹಕಾರ ಸಂಘಗಳ ಅಪರ ನಿಬಂಧಕರ ಪತ್ರ ಸಂಖ್ಯೆ: ಹೆಚ್‌ಎಸ್‌ಜಿ–2:153/ಹೆಚ್‌ಹೆಚ್‌ಎಸ್/2008–09, ದಿನಾಂಕ 17–11–2008.

**ಪ್ರಸ್ತಾವನೆ :**

ದಿ ಐಡಿಯಲ್ ಹೋಮ್ಸ್ ಗೃಹ ನಿರ್ಮಾಣ ಸಹಕಾರ ಸಂಘ ನಿಯಮಿತ, ಬೆಂಗಳೂರು ಇದರ 15 ಅಂಶಗಳ ಅವ್ಯವಹಾರದ ಬಗ್ಗೆ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 64ರ ವಿಚಾರಣೆ ನಡೆಸಲು ಸಹಕಾರ ಅಭಿವೃದ್ಧಿ ಅಧಿಕಾರಿ, ಬೆಂಗಳೂರು ಉತ್ತರ ತಾಲ್ಲೂಕು ಇವರನ್ನು ನೇಮಿಸಿ ಬೆಂಗಳೂರು ಪ್ರಾಂತದ ಸಹಕಾರ ಸಂಘಗಳ ಜಂಟಿ ನಿಬಂಧಕರು ದಿನಾಂಕ 8–5–2007ರಂದು ಆದೇಶಿಸಿದ್ದು ತದನಂತರ ವಿಚಾರಣಾಧಿಕಾರಿಯವರ ಅವಧಿಯನ್ನು ಕಾಲಕಾಲಕ್ಕೆ ವಿಸ್ತರಿಸಲಾಗಿದ್ದು ವಿಚಾರಣಾಧಿಕಾರಿಯವರ ಅವಧಿಯು ದಿನಾಂಕ 8–11–2008ಕ್ಕೆ ಮುಕ್ತಾಯವಾಗಿರುತ್ತದೆ. ಸದರಿ ವಿಚಾರಣೆಯನ್ನು ಮುಕ್ತಾಯಗೊಳಿಸಿ ವಿಚಾರಣಾ ವರದಿಯನ್ನು ಸಲ್ಲಿಸಲು ಕಾಲಾವಕಾಶಬೇಕಾಗುವ ಕಾರಣ ಮತ್ತೊಮ್ಮೆ 3 ತಿಂಗಳಷ್ಟು ಕಾಲಾವಕಾಶವನ್ನು ವಿಸ್ತರಿಸಲು (ದಿನಾಂಕ 9–11–2008 ರಿಂದ ದಿನಾಂಕ 8–2–2009ರವರೆಗೆ) ಸಹಕಾರ ಸಂಘಗಳ ಅಪರ ನಿಬಂಧಕರು ಮೇಲೆ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಸಹಕಾರ ಸಂಘಗಳ ಅಪರ ನಿಬಂಧಕರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಒ 123 ಸಿಹೆಚ್‌ಎಸ್ 2007, ಬೆಂಗಳೂರು, ದಿನಾಂಕ: 20ನೇ ಡಿಸೆಂಬರ್ 2008.**

ಪ್ರಸ್ತಾವನೆಯಲ್ಲಿ ವಿವರಿಸಿದ ಸಂಗತಿಗಳ ಹಿನ್ನೆಲೆಯಲ್ಲಿ ದಿ ಐಡಿಯಲ್ ಹೋಮ್ಸ್ ಗೃಹ ನಿರ್ಮಾಣ ಸಹಕಾರ ಸಂಘ ನಿಯಮಿತ, ಬೆಂಗಳೂರು ಇದರ ಪ್ರಕರಣ 64ರ ವಿಚಾರಣೆಯ ಅವಧಿಯನ್ನು ದಿನಾಂಕ 9–11–2008 ರಿಂದ ದಿನಾಂಕ 8–2–2009 ರವರೆಗೆ ವಿಸ್ತರಿಸಲು ಅನುವಾಗುವಂತೆ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 121 ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಸದರಿ ಅಧಿನಿಯಮದ ಪ್ರಕರಣ 64(2–ಎ) ಈ ಕೆಳಕಂಡ ಮಾರ್ಪಾಟುಗಳೊಂದಿಗೆ ದಿ ಐಡಿಯಲ್ ಹೋಮ್ಸ್ ಗೃಹ ನಿರ್ಮಾಣ ಸಹಕಾರ ಸಂಘ ನಿಯಮಿತ, ಬೆಂಗಳೂರು ಇದಕ್ಕೆ ಅನ್ವಯವಾಗತಕ್ಕದ್ದೆಂದು ನಿರ್ದೇಶಿಸುತ್ತದೆ, ಎಂದರೆ:

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 64ರ ಉಪಪ್ರಕರಣ (2ಎ) (1)ರಲ್ಲಿನ "ಆರು ತಿಂಗಳು" ಎಂಬ ಪದಗಳಿಗೆ ಬದಲಾಗಿ "ಒಂಬತ್ತು ತಿಂಗಳು" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**ಸೂಚನೆ:** 2) ಪ್ರಕರಣ 64 ಉಪ–ಪ್ರಕರಣ (2–ಎ)ಕ್ಕೆ ಮಾಡಿದ ಈ ಮಾರ್ಪಾಡು ದಿನಾಂಕ 8–2–2009ರವರೆಗೆ ಜಾರಿಯಲ್ಲಿರತಕ್ಕದ್ದು. ಈ ಅವಧಿ ಮುಗಿದ ನಂತರ ಈ ಆದೇಶದ ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ ಸದರಿ ಪ್ರಕರಣ 64ರ ಉಪ–ಪ್ರಕರಣ (2–ಎ)ರಲ್ಲಿನ ಉಪಬಂಧಗಳು ಪುನಃ ಜಾರಿಗೆ ಬರತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.140

**ಆರ್.ಎಸ್. ಹುಚ್ಚಾಚಾರಿ**

ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಜಂಟಿ ಕಾರ್ಯದರ್ಶಿ, ಸಹಕಾರ ಇಲಾಖೆ.

## ಕಂದಾಯ ಸಚಿವಾಲಯ

**ವಿಷಯ :** ಕರ್ನಾಟಕ ಸಾರ್ವಜನಿಕ ಜಮೀನುಗಳ ನಿಗಮಕ್ಕೆ ಹುದ್ದೆಗಳನ್ನು ಸ್ಥಳಾಂತರಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 388 ಎಲ್‌ಜಿಬಿ 2008, ದಿ: 29–8–2008.
2. ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 388 ಎಲ್‌ಜಿಬಿ 2008, ದಿ: 8–9–2008.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರಲ್ಲಿನ ಸರ್ಕಾರದ ಆದೇಶ ದಿ: 29–8–2008ರಲ್ಲಿ ಬೆಂಗಳೂರು ನಗರ ಜಿಲ್ಲೆಯೂ ಸೇರಿದಂತೆ ರಾಜ್ಯದ ಎಲ್ಲಾ ಜಿಲ್ಲೆಗಳಲ್ಲಿ ಸರ್ಕಾರಿ ಜಮೀನುಗಳಿಗೆ ಸಂರಕ್ಷಿಸಲು, ಅವಶ್ಯವಿದ್ದಲ್ಲಿ ಅಭಿವೃದ್ಧಿ ಪಡಿಸಲು ಮತ್ತು ಅವುಗಳನ್ನು ಸ್ಪರ್ಧಾತ್ಮಕವಾಗಿ ವಿಲೇ ಮಾಡಿ ಸಂಪನ್ಮೂಲಗಳನ್ನು ಸಂಗ್ರಹಿಸಲು ಹಾಗೂ ಹಂಚಿಕೆ ಮಾಡಲು ಕಂಪನೀಸ್ ಆಕ್ಟ್ ಅಡಿಯಲ್ಲಿ ಕರ್ನಾಟಕ ಸಾರ್ವಜನಿಕ ಜಮೀನುಗಳ ನಿಗಮವನ್ನು ಸ್ಥಾಪಿಸಲಾಗಿರುತ್ತದೆ. ಅಲ್ಲದೇ ಮೇಲೆ ಓದಲಾದ ಕ್ರಮ ಸಂಖ್ಯೆ (2)ರಲ್ಲಿ ಸರ್ಕಾರದ ಆದೇಶ ದಿ: 8–9–2008ರಲ್ಲಿ ಈ ನಿಗಮಕ್ಕೆ ನಿರ್ದೇಶಕರುಗಳನ್ನು ನೇಮಕ ಮಾಡಲಾಗಿರುತ್ತದೆ.

ವಿಶೇಷ ಜಿಲ್ಲಾಧಿಕಾರಿಗಳು (ಜಾರಿದಳ), ಬೆಂಗಳೂರು ನಗರ ಜಿಲ್ಲೆ ಇಲ್ಲಿ ಪ್ರಸ್ತುತ ಕಾರ್ಯ ನಿರ್ವಹಿಸುತ್ತಿರುವ ಹಲವು ಹುದ್ದೆಗಳನ್ನು ಕರ್ನಾಟಕ ಸಾರ್ವಜನಿಕ ಜಮೀನುಗಳ ನಿಗಮಕ್ಕೆ ಸ್ಥಳಾಂತರಿಸುವ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿದೆ. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 518 ಎಲ್‌ಜಿಬಿ 2008, ಬೆಂಗಳೂರು, ದಿನಾಂಕ: 22ನೇ ಜನವರಿ 2009.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ವಿಶೇಷ ಜಿಲ್ಲಾಧಿಕಾರಿಗಳು (ಜಾರಿದಳ), ಬೆಂಗಳೂರು ಇಲ್ಲಿ ಹಾಲಿ ಇರುವ ಹುದ್ದೆಗಳ ಪೈಕಿ ಈ ಕೆಳಕಂಡ ಹುದ್ದೆಗಳನ್ನು ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಕರ್ನಾಟಕ ಸಾರ್ವಜನಿಕ ಜಮೀನುಗಳ ನಿಗಮಕ್ಕೆ ಸ್ಥಳಾಂತರಿಸಲಾಗಿದೆ.

| ಕ್ರ.ಸಂ. | ಹುದ್ದೆಯ ಹೆಸರು | ಹುದ್ದೆಗಳ ಸಂಖ್ಯೆ |
|---|---|---|
| 1 | ಪ್ರಥಮ ದರ್ಜೆ ಸಹಾಯಕರು | 2 |
| 2 | ದ್ವಿತೀಯ ದರ್ಜೆ ಸಹಾಯಕರು | 1 |
| 3 | ಶೀಘ್ರಲಿಪಿಗಾರರು | 1 |
| 4 | ಡಿ ಗ್ರೂಪ್ ನೌಕರರು | 1 |
| 5 | Panel of Advocates | 1 |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.409

**ಇ. ಈಶ್ವರ ನಾಯಕ್**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಭೂ ಮಂಜೂರಾತಿ)

## ಸಹಕಾರ ಸಚಿವಾಲಯ

**ವಿಷಯ :** ಸರ್ಕಾರಿ ನೌಕರರ ಮನೋರಂಜನಾ ಕೇಂದ್ರ (ರಿ), ದಾವಣಗೆರೆ ಈ ಸಂಸ್ಥೆಗೆ ಆಡಳಿತಾಧಿಕಾರಿಯನ್ನು ನೇಮಕ ಮಾಡುವ ಕುರಿತು.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಕಂಇ 73 ಮುನೋಸೋ 2006, ದಿನಾಂಕ 17–3–2008.
2. ಉಪ ವಿಭಾಗಾಧಿಕರಿಗಳು, ದಾವಣಗೆರೆ ಉಪ ವಿಭಾಗ, ದಾವಣಗೆರೆ ಇವರ ಪತ್ರ ಸಂಖ್ಯೆ: ಇತರೆ/85/ 2008–09, ದಿನಾಂಕ 8–12–2008.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ದಿನಾಂಕ 17–3–2008ರ ಸರ್ಕಾರಿ ಆದೇಶದಲ್ಲಿ ಸರ್ಕಾರಿ ನೌಕರರ ಮನೋರಂಜನಾ ಕೇಂದ್ರ (ರಿ), ದಾವಣಗೆರೆ ಈ ಸಂಘಕ್ಕೆ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 27ಎ ಪ್ರಕಾರ ಸರ್ಕಾರಕ್ಕೆ ನಿಹಿತವಾಗಿರುವ ಅಧಿಕಾರವನ್ನು ಚಲಾಯಿಸಿ ಸಂಘದ ಹಿತದೃಷ್ಟಿಯಿಂದ ಉಪ ವಿಭಾಗಾಧಿಕಾರಿ, ದಾವಣಗೆರೆ ಉಪ ವಿಭಾಗ, ದಾವಣಗೆರೆ ಇವರನ್ನು ಆಡಳಿತಾಧಿಕಾರಿಯಾಗಿ 6 ತಿಂಗಳ ಅವಧಿಗೆ ಅಥವಾ ಸಂಸ್ಥೆಗೆ ಚುನಾವಣೆ ನಡೆಸಿ ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವ ಬಗ್ಗೆ ಇದು ಯಾವುದು ಮೊದಲೋ ಅಲ್ಲಿಯವರೆಗೆ ನೇಮಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ದಿನಾಂಕ 8–12–2008ರ ಪತ್ರದಲ್ಲಿ ದಿನಾಂಕ 17–3–2008ರ ಸರ್ಕಾರದ ಆದೇಶದಂತೆ ಸರ್ಕಾರಿ ನೌಕರರ ಮನೋರಂಜನಾ ಕೇಂದ್ರ (ರಿ), ದಾವಣಗೆರೆ ಈ ಸಂಸ್ಥೆಗೆ ಅಡಳಿತಾಧಿಕಾರಿಯಾಗಿ ನೇಮಕ ಮಾಡಲಾಗಿದ್ದು, ಆ ಪ್ರಕಾರ ಆಡಳಿತಾಧಿಕಾರಿಯಾಗಿ ಅಧಿಕಾರ ವಹಿಸಿಕೊಂಡಿರುತ್ತೇನೆ. ಆದರೆ, ಸರ್ಕಾರದ ಆದೇಶ ತಡವಾಗಿ ತಲುಪಿರುವ ಹಿನ್ನೆಲೆಯಲ್ಲಿ ಸದರಿ ಸಂಸ್ಥೆಗೆ ಚುನಾವಣೆ ನಡೆಸಿ ಚುನಾಯಿತಿ ನೂತನ ಆಡಳಿತ ಮಂಡಳಿಗೆ ಅಧಿಕಾರ ಹಸ್ತಾಂತರಿಸಲು 6 ತಿಂಗಳ ಅವಧಿಗೆ ಕಾಲಾವಕಾಶ ನೀಡುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಇ 96 ಸಸಂನೋ 2008, ಬೆಂಗಳೂರು, ದಿನಾಂಕ: 21ನೇ ಜನವರಿ 2009.**

ಸರ್ಕಾರಿ ನೌಕರರ ಮನೋರಂಜನಾ ಕೇಂದ್ರ (ರಿ), ದಾವಣಗೆರೆ ಈ ಸಂಘದ ಹಿತದೃಷ್ಟಿಯಿಂದ ಆಡಳಿತಾಧಿಕಾರಿ ಅವಧಿಯನ್ನು ದಿನಾಂಕ 17–3–2008 ರಿಂದ 16–9–2008 ರವರೆಗೆ ಹಾಗೂ ದಿನಾಂಕ 17–9–2008 ರಿಂದ 6 ತಿಂಗಳ ಅವಧಿಗೆ ವಿಸ್ತರಿಸಲಾಗಿದೆ. ಸದರಿ ಅವಧಿಯಲ್ಲಿ ಸಂಸ್ಥೆಗೆ ಕಡ್ಡಾಯವಾಗಿ ಚುನಾವಣೆ ನಡೆಸಿ ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವಂತೆ ಆದೇಶಿಸಿದೆ ಹಾಗೂ ನಿಗದಿತ ಅವಧಿಯಲ್ಲಿ ಕ್ರಮ ಕೈಗೊಂಡ ಬಗ್ಗೆ ಸರ್ಕಾರಕ್ಕೆ ವರದಿ ನೀಡಲು ಸಹ ಸೂಚಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.399

**ನಂಜುಂಡಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ, ಸಹಕಾರ ಇಲಾಖೆ

## ಮೂಲಸೌಲಭ್ಯ ಅಭಿವೃದ್ಧಿ ಸಚಿವಾಲಯ

**ವಿಷಯ :** ಮೂಲಸೌಲಭ್ಯ ಅಭಿವೃದ್ಧಿ ಇಲಾಖೆಯ ವಿಶೇಷ ಕಾರ್ಯದರ್ಶಿಯವರ ಕಛೇರಿ ಉಪಯೋಗಕ್ಕಾಗಿ ಒಂದು ಹೊಸ Hyundai Verna XI- ಪೆಟ್ರೋಲ್ ಕಾರನ್ನು ಖರೀದಿಸುವ ಬಗ್ಗೆ.

**ಓದಲಾಗಿದೆ:**
1. ಸಿಆಸುಇ ಇಲಾಖೆಯ ಅಧಿಕೃತ ಜ್ಞಾಪನ ಸಂ. ಸಿಆಸುಇ 174 ಶಿವಾನೀ 2007, ದಿನಾಂಕ 12–5–08
2. ಸಿಆಸುಇ ಇಲಾಖೆಯ (ರಾಜ್ಯ ಶಿಷ್ಠಾಚಾರ) ಅಧಿಕೃತ ಜ್ಞಾಪನ ಸಂ. ಸಿಆಸುಇ 156 ಶಿವಾನೀ 2008, ದಿನಾಂಕ 20–11–08.
3. ಮೆ. ಟ್ರೈಡೆಂಟ್ ಆಟೋ ಮೊಬೈಲ್ಸ್ (P) ಲಿಮಿಟೆಡ್, ಬೆಂಗಳೂರು ಇವರು ಸಲ್ಲಿಸಿರುವ ದಿನಾಂಕ 27–12–08ರ ಪ್ರೊಫಾರ್ಮ ಇನ್‌ವಾಯ್ಸ್.

**ಪ್ರಸ್ತಾವನೆ :**

ಮೂಲಸೌಲಭ್ಯ ಅಭಿವೃದ್ಧಿ ಇಲಾಖೆಯ ವಿಶೇಷ ಕಾರ್ಯದರ್ಶಿಯವರ ಕಚೇರಿಯ ಉಪಯೋಗಕ್ಕಾಗಿ ಹೊಸ Hyundai Verna XI- ಪೆಟ್ರೋಲ್ ಕಾರನ್ನು ಖರೀದಿಸಲು ಉದ್ದೇಶಿಸಲಾಗಿದೆ.

2. ಮೇಲೆ ಓದಲಾದ (1)ರ ಸಿಆಸು ಇಲಾಖೆಯ ಅಧಿಕೃತ ಜ್ಞಾಪನದಲ್ಲಿ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು/ ಕಾರ್ಯದರ್ಶಿಗಳಿಗೆ ಹೊಸ ವಾಹನ ಖರೀದಿಗೆ ಆರ್ಥಿಕ ಮಿತಿಯನ್ನು ರೂ. 6.50 ಲಕ್ಷಗಳಿಗೆ ಪರಿಷ್ಕರಿಸಲಾಗಿದೆ. (ಟ್ಯಾಕ್ಸ್ ಹೊರತುಪಡಿಸಿ) ಹಾಗೂ ಹೊಸ ವಾಹನ ಖರೀದಿಸುವ ಸಂದರ್ಭದಲ್ಲಿ ಇಂಧನ ಮಿತವ್ಯಯ ಹಾಗೂ ನಿರ್ವಹಣಾ ವೆಚ್ಚ ಕಡಿಮೆ ಹೊಂದಿರುವ ವಾಹನಗಳನ್ನು DGS & D ದರಗಳಿಗೆ ಒಳಪಟ್ಟು ಖರೀದಿಸುವಂತೆ ತಿಳಿಸಲಾಗಿದೆ.

3. ಮೇಲೆ ಓದಲಾದ (2)ರ ಅಧಿಕೃತ ಜ್ಞಾಪನದಲ್ಲಿ ಸಚಿವಾಲಯದ ವಿಶೇಷ ಕಾರ್ಯದರ್ಶಿ/ ಕಾರ್ಯದರ್ಶಿಗಳು ವಾಹನ ಚಾಲಕರ ಸಹಿತ ನಾಮ ನಿರ್ದಿಷ್ಠ ವಾಹನವನ್ನು ಹೊಂದಲು ಅವಕಾಶ ಕಲ್ಪಿಸಲಾಗಿದೆ. ಇದರಂತೆ ಪ್ರಸ್ತಾವನೆಗೆ ಸಿಆಸುಇ ಮತ್ತು ಆರ್ಥಿಕ ಇಲಾಖೆಯ ಸಹಮತಿ ಪಡೆದಿದೆ.

4. ಮೆ. ಟ್ರೈಡೆಂಟ್ ಆಟೋ ಮೊಬೈಲ್ಸ್ (P) ಲಿಮಿಟೆಡ್, ಬೆಂಗಳೂರು, ನಂ.1, ಲೋಯರ್ ಪ್ಯಾಲೇಸ್, ಆರ್ಚರ್ಡ್ಸ್, ಸ್ಯಾಂಕಿ ರಸ್ತೆ, ಬೆಂಗಳೂರು–3 ಇವರಿಂದ ಪ್ರೋಫಾರ್ಮ ಇನ್‌ವಾಯ್ಸ್‌ನ್ನು ಮೇಲೆ ಓದಲಾದ (3)ರಲ್ಲಿ ಪಡೆಯಲಾಗಿದ್ದು, ಇದರಂತೆ Hyundai Verna XI Petrol ವಾಹನದ ಬೆಲೆ ರೂ. 6,52,551.00 ಗಳಾಗಿದೆ.

5. ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಮೂಅಇ 61 ಮೂಇವಿ 2008, ಬೆಂಗಳೂರು, ದಿನಾಂಕ: 27ನೇ ಡಿಸೆಂಬರ್ 2008.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಮೂಲಸೌಲಭ್ಯ ಅಭಿವೃದ್ಧಿ ಇಲಾಖೆಯ ಸರ್ಕಾರದ ವಿಶೇಷ ಕಾರ್ಯದರ್ಶಿಯವರ ಕಛೇರಿಯ ಉಪಯೋಗಕ್ಕಾಗಿ Hyundai Verna XI Petrol ಕಾರನ್ನು ರೂ. 6,50,000.00 (ರೂಪಾಯಿ ಆರು ಲಕ್ಷ ಐವತ್ತು ಸಾವಿರ ಮಾತ್ರ)ಗಳ ವೆಚ್ಚದಲ್ಲಿ ಮೆ. ಟ್ರೈಡೆಂಟ್ ಆಟೋ ಮೊಬೈಲ್ಸ್ (P) ಲಿಮಿಟೆಡ್, ಬೆಂಗಳೂರು ಇವರಿಂದ ಖರೀದಿಸಲು ಅನುಮತಿ ನೀಡಲಾಗಿದೆ.

2. ಈ ವಾಹನಕ್ಕಾಗಿ ತಗಲುವ ವೆಚ್ಚವನ್ನು 2007–08ನೇ ಸಾಲಿನ ಆಯವ್ಯಯದ ಲೆಕ್ಕ ಶೀರ್ಷಿಕೆ "2052–Secretariat General Services, 090-Secretariat-01 KGS 195 Transport expenses ನಲ್ಲಿ ಭರಿಸುವುದು.

3. ಈ ಆದೇಶವನ್ನು ಸಿಆಸುಇ 174 ಶಿವಾನೀ 2007, ದಿನಾಂಕ 12–5–08 ಹಾಗೂ ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 1641 ವೆಚ್ಚ-I/08 ದಿನಾಂಕ 22–12–2008ರಲ್ಲಿ ನೀಡಿದ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.255

**ಎನ್. ಮಂಜುಳಗೀತ**

ಅಧೀನ ಕಾರ್ಯದರ್ಶಿ, ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ತಿದ್ದುಪಡಿ**

**ಸಂಖ್ಯೆ: ಆಕುಕ 111 ಐಎಂಎಂ 2007, ಬೆಂಗಳೂರು, ದಿನಾಂಕ: 26ನೇ ಡಿಸೆಂಬರ್ 2008.**

ಸರ್ಕಾರದ ಆದೇಶ ಸಂಖ್ಯೆ: ಆಕುಕ 111 ಐಎಂಎಂ 2007, ದಿನಾಂಕ 1–12–2008 ರಲ್ಲಿನ ಆದೇಶ ಭಾಗದಲ್ಲಿನ 2ನೇ ಸಾಲಿನಲ್ಲಿ ನಮೂದಾದ 'ಪ್ರಯೋಗಾಲಯದಲ್ಲಿ' ಎಂಬುದರ ಬದಲಾಗಿ **'ಪ್ರಯೋಗಾಲಯಗಳಲ್ಲಿ'** ಎಂದು ಮತ್ತು ಅದೇ ಆದೇಶದ ನಮೂನೆಯ ಕಾಲಂ 3 ರಲ್ಲಿನ ಶೀರ್ಷಿಕೆಯಲ್ಲಿ ನಮೂದಾದ 'ಪ್ರಸ್ತಾವಿತ ಬದಲಾವಣೆ' ಎಂಬುದರ ಬದಲಾಗಿ **"ಮರು ಪದನಾಮೀಕರಿಸಿದಂತೆ ಹುದ್ದೆಗಳು"** ಎಂದು ಹಾಗೂ ಪ್ರಸ್ತಾವನೆಯಲ್ಲಿನ ನಮೂನೆಯ 4ನೇ ಕಾಲಂನ ಷರಾ ಭಾಗದಲ್ಲಿ ಮತ್ತು ಆದೇಶ ಭಾಗದ ನಮೂನೆಯ ಕ್ರ.ಸಂ. 2ರ ಕಾಲಂ 2ರ ಆವರಣದಲ್ಲಿ ನಮೂದಾದ 'ಫಾರ್ಮಾಕಾಗ್ನಸಿಸ್ಟ್' ನಂತರ **"ಫಾರ್ಮಾಕಾಲಜಿಸ್ಟ್"** ಎಂದು ಸೇರಿಸಿ ತಿದ್ದಿ ಓದಿಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.251

**ಎನ್. ಮಹಾಲಕ್ಷ್ಮಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ಭಾರತೀಯ ವೈದ್ಯ ಪದ್ಧತಿ)

## ಕಂದಾಯ ಸಚಿವಾಲಯ

**ವಿಷಯ :** ಶ್ರೀ ಜಿ.ಹೆಚ್. ನಾಗಹನುಮಯ್ಯ, ತಹಶೀಲ್ದಾರ್, ದಾವಣಗೆರೆ ತಾಲ್ಲೂಕು ಇವರ ಅಮಾನತ್ತನ್ನು ತೆರವುಗೊಳಿಸಿ, ಸ್ಥಳ ನಿಯುಕ್ತಿಗೊಳಿಸುವ ಕುರಿತು.

**ಓದಲಾಗಿದೆ:** ಸರ್ಕಾರಿ ಆದೇಶ ಸಂಖ್ಯೆ: ಕಂಇ 55 ಎಡಿಇ 2008, ದಿನಾಂಕ 20–11–2008.

**ಪ್ರಸ್ತಾವನೆ :**

ದಿನಾಂಕ 17–11–2008ರಂದು ಮಾನ್ಯ ಕಂದಾಯ ಸಚಿವರು, ದಾವಣಗೆರೆ ತಾಲ್ಲೂಕು ಕಛೇರಿಗೆ ಭೇಟಿ ನೀಡಿದ ಸಂದರ್ಭದಲ್ಲಿ, ತಹಶೀಲ್ದಾರ್ ಕಛೇರಿಯನ್ನು ತಪಾಸಣೆ ನಡೆಸಿದ್ದು, ತಪಾಸಣೆ ಸಮಯದಲ್ಲಿ ಶ್ರೀ ನಾಗಹನುಮಯ್ಯ, ತಹಶೀಲ್ದಾರ್ ಇವರು ಕಛೇರಿ ಆಡಳಿತವನ್ನು ಪರಿಣಾಮಕಾರಿಯಾಗಿ ಹಾಗೂ ಸಮರ್ಪಕವಾಗಿ ನಿರ್ವಹಿಸದೇ ಇರುವುದು ಅಲ್ಲದೇ, ಪಿಂಚಣಿ ಸೌಲಭ್ಯಗಳಾದ ವೃದ್ಧಾಪ್ಯ ವೇತನ, ಅಂಗವಿಕಲರ ವೇತನ, ವಿಧವಾ ವೇತನ, ಸಾಮಾಜಿಕ ಭದ್ರತಾ ಯೋಜನೆ, ಸಂಧ್ಯಾ ಸುರಕ್ಷಾ ಯೋಜನೆಗಳನ್ನು ಸಾರ್ವಜನಿಕರಿಗೆ ತಲುಪಿಸುವಲ್ಲಿ ವಿಫಲರಾಗಿ ಕರ್ತವ್ಯ ಚ್ಯುತಿ ಎಸಗಿರುವುದು ಮೇಲ್ನೋಟಕ್ಕೆ ಕಂಡುಬಂದಿದ್ದ ಹಿನ್ನಲೆಯಲ್ಲಿ, ಮೇಲೆ ಓದಲಾದ ದಿನಾಂಕ 20–11–2008ರ ಆದೇಶದಲ್ಲಿ ಶ್ರೀ ಜಿ.ಹೆಚ್. ನಾಗಹನುಮಯ್ಯ, ತಹಶೀಲ್ದಾರ್, ದಾವಣಗೆರೆ ತಾಲ್ಲೂಕು ಇವರ ವಿರುದ್ಧ ಶಿಸ್ತು ಕ್ರಮ ಕಾಯ್ದಿರಿಸಿ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾನುಸಾರ 1957ರ ನಿಯಮ 10ರನ್ವಯ, ಅವರನ್ನು ಕೂಡಲೇ ಜಾರಿಗೆ ಬರುವಂತೆ ಅಮಾನತ್ತಿನಲ್ಲಿ ಇರಿಸಿ, ಆದೇಶಿಸಲಾಗಿತ್ತು.

ಜಿಲ್ಲಾಧಿಕಾರಿ, ದಾವಣಗೆರೆ ಜಿಲ್ಲೆ ಇವರು ಸರ್ಕಾರಕ್ಕೆ ವರದಿ ಸಲ್ಲಿಸಿ, ಸಿಬ್ಬಂದಿಯ ಕೊರತೆಯಿಂದ ಅರ್ಜಿಗಳನ್ನು ವಿಲೇ ಮಾಡುವಲ್ಲಿ ವಿಳಂಬವಾಗಿದ್ದು, ಈಗ ಬಾಕಿ ಇರುವ ಅರ್ಜಿಗಳನ್ನು ವಿಲೇ ಮಾಡಿರುವುದರಿಂದ, ಶ್ರೀ ನಾಗಹನುಮಯ್ಯ ಒಬ್ಬ ದಕ್ಷ ಅಧಿಕಾರಿಯಾಗಿರುವುದರಿಂದ ಅವರ ಅಮಾನತ್ತು ತೆರವುಗೊಳಿಸುವಂತೆ ಶಿಫಾರಸ್ಸು ಮಾಡಿದ್ದಾರೆ. ಈ ವಿಷಯವನ್ನು ಕೂಲಂಕಷವಾಗಿ ಸರ್ಕಾರವು ಪರಿಶೀಲಿಸಿ, ಇವರನ್ನು ಅಮಾನತ್ತು ತೆರವುಗೊಳಿಸಿ ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 79 ಎಟಿಎಸ್ 2008 (ಭಾಗ) ಬೆಂಗಳೂರು, ದಿನಾಂಕ: 31ನೇ ಡಿಸೆಂಬರ್ 2008.**

ಶ್ರೀ ಜಿ.ಹೆಚ್. ನಾಗಹನುಮಯ್ಯ, ತಹಶೀಲ್ದಾರ್, ದಾವಣಗೆರೆ ತಾಲ್ಲೂಕು (ಪ್ರಸ್ತುತ ಅಮಾನತ್ತು) ಇವರನ್ನು 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ ನಿಯಮ 10(5)(c)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಅವರ ವಿರುದ್ಧದ ಇಲಾಖಾ ವಿಚಾರಣೆಯನ್ನು ಕಾಯ್ದಿರಿಸಿ, ಸದರಿಯವರನ್ನು ಈ ಕೂಡಲೇ ಜಾರಿಗೆ ಬರುವಂತೆ, ಅಮಾನತ್ತಿನಿಂದ ಬಿಡುಗಡೆಗೊಳಿಸಿ, ಇವರನ್ನು ಗದಗ್ ಜಿಲ್ಲೆಯ ರೋಣ ತಾಲ್ಲೂಕಿನಲ್ಲಿ ಖಾಲಿ ಇರುವ ತಹಶೀಲ್ದಾರ್ ಹುದ್ದೆಗೆ ಈ ಕೂಡಲೇ ಜಾರಿಗೆ ಬರುವಂತೆ ಸ್ಥಳ ನಿಯುಕ್ತಿಗೊಳಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.248

**ಎಂ.ಎಸ್. ದೇಸಾಯಿ**

ಸರ್ಕಾರದ ಉಪ ಕಾರ್ಯದರ್ಶಿ, ಕಂದಾಯ ಇಲಾಖೆ (ಸೇ ಮತ್ತು ವಿ.ನಿ)

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿ ಕಾರ್ಯ ನಿರ್ವಹಿಸುತ್ತಿರುವ ವೈದ್ಯಾಧಿಕಾರಿ/ದಂತ ಆರೋಗ್ಯಾಧಿಕಾರಿ/ತಜ್ಞರುಗಳಿಗೆ ಗ್ರಾಮೀಣ ಭತ್ಯೆ, ಸ್ನಾತಕೋತ್ತರ ಪದವಿ ಭತ್ಯೆ, ಶೈಕ್ಷಣಿಕ ಭತ್ಯೆ, ಅಗತ್ಯ ಆರೋಗ್ಯ ಸೇವಾ ಭತ್ಯೆ ಇತ್ಯಾದಿಗಳನ್ನು ನೀಡುವ ಬಗ್ಗೆ ಪರಿಶೀಲಿಸಲು ಸಮಿತಿ ರಚಿಸುವ ಬಗ್ಗೆ.

**ಓದಲಾಗಿದೆ:**
1. ಆಯುಕ್ತರು, ಆರೋಗ್ಯ ಮತ್ತು ಕು.ಕ. ಸೇವೆಗಳು ಪತ್ರ ಸಂಖ್ಯೆ: ಜಿಆರ್‌ಒ(1)/115/07-08, ದಿನಾಂಕ 13-8-2008.
2. ಕರ್ನಾಟಕ ಸರ್ಕಾರಿ ವೈದ್ಯಾಧಿಕಾರಿಗಳ ಸಂಘ (ನೋಂ) ಇವರ ಮನವಿ ದಿನಾಂಕ 3-8-2008, 24-9-2008 ಮತ್ತು 4-11-2008.
3. ಮಾನ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವರ ಅಧ್ಯಕ್ಷತೆಯಲ್ಲಿ ದಿನಾಂಕ 13-11-2008ರಂದು ನಡೆದ ಸಭೆಯ ತೀರ್ಮಾನ.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳುರು ಇವರ ಪತ್ರದಲ್ಲಿ ವೈದ್ಯಕೀಯ ಶಿಕ್ಷಣ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಬೋಧಕ ಸಿಬ್ಬಂದಿಯವರಿಗೆ ನೀಡುತ್ತಿರುವ ಭತ್ಯೆಗಳಿಗೆ ಸಮಾನಾಂತರವಾಗಿ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ವೈದ್ಯಾಧಿಕಾರಿ/ ದಂತ ಆರೋಗ್ಯಾಧಿಕಾರಿಗಳಿಗೆ ಭತ್ಯೆಗಳನ್ನು ನೀಡುವ ನಿಟ್ಟಿನಲ್ಲಿ ಶೈಕ್ಷಣಿಕ ಭತ್ಯೆ/ವಿಶೇಷ ಭತ್ಯೆ/ ಗಂಡಾಂತರ ಭತ್ಯೆ/ ಕಾರ್ಯನಿರ್ವಹಣಾ ಭತ್ಯೆ ಹಾಗೂ ನಾನ್ ಪ್ರಾಕ್ಟೀಸ್ ಅಲೋಯನ್ಸ್ ಭತ್ಯೆಗಳನ್ನು ಮಂಜೂರು ಮಾಡುವ ಬಗ್ಗೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಮೇಲೆ (2)ರಲ್ಲಿ ಓದಲಾದ ಕಾರ್ಯದರ್ಶಿಗಳು ಹಾಗೂ ಅಧ್ಯಕ್ಷರು, ಕರ್ನಾಟಕ ಸರ್ಕಾರಿ ವೈದ್ಯಾಧಿಕಾರಿಗಳ ಸಂಘ, ಬೆಂಗಳೂರು ಇವರು ಸರ್ಕಾರಕ್ಕೆ ಮನವಿಯನ್ನು ಸಲ್ಲಿಸಿ ತಮ್ಮ ಪ್ರಮುಖ ಬೇಡಿಕೆಗಳಲ್ಲಿ ಒಂದಾದ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿ ಸೇವೆ ಸಲ್ಲಿಸುತ್ತಿರುವ ವೈದ್ಯರುಗಳಿಗೆ ವೈದ್ಯಕೀಯ ಶಿಕ್ಷಣ ಇಲಾಖೆಯ ಬೋಧಕ ಸಿಬ್ಬಂದಿಯ ಸರಿಸಮಾನವಾದ ವೇತನ/ ಭತ್ಯೆಗಳನ್ನು ನಿಗದಿಪಡಿಸುವಂತೆ ಕೋರಿರುತ್ತಾರೆ ಹಾಗೂ ತಮ್ಮ ಬೇಡಿಕೆಗಳನ್ನು 10-11-2008 ರೊಳಗಾಗಿ ಈಡೇರಿಸಲು ಮನವಿ ಮಾಡಿರುತ್ತಾರೆ.

ದಿನಾಂಕ 10-11-2008 ರಿಂದ 13-11-2008ರ ವರೆಗೆ ವೈದ್ಯರು ಮುಷ್ಕರ ನಡೆಸಿದ್ದು ಈ ಸಂದರ್ಭದಲ್ಲಿ ಮಾನ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವರ ಅಧ್ಯಕ್ಷತೆಯಲ್ಲಿ ದಿನಾಂಕ 13-11-2008ರಂದು ಸಭೆ ನಡೆದು ವೈದ್ಯರ ಭಾಗಶಃ ಬೇಡಿಕೆಗಳಿಗೆ ಸರ್ಕಾರವು ಸ್ಪಂದಿಸಿ, ಅವರ ಪ್ರಮುಖ ಬೇಡಿಕೆಯಾದ ಗ್ರಾಮೀಣ ಭತ್ಯೆ, ಸ್ನಾತಕೋತ್ತರ ಪದವಿ ಭತ್ಯೆ, ಶೈಕ್ಷಣಿಕ ಭತ್ಯೆ, ಅಗತ್ಯ ಆರೋಗ್ಯ ಸೇವಾ ಭತ್ಯೆ, ಗಂಡಾಂತರ ಭತ್ಯೆ, ಆಡಳಿತಾತ್ಮಕ ಭತ್ಯೆ ಮತ್ತು ನಾನ್-ಪ್ರಾಕ್ಟೀಸ್ ಅಲೋಯನ್ಸ್ ಇತ್ಯಾದಿಗಳನ್ನು ನೀಡುವ ಬಗ್ಗೆ ಪರಿಶೀಲಿಸುವ ಕುರಿತು ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು ಇವರ ಅಧ್ಯಕ್ಷತೆಯಲ್ಲಿ ಸಮಿತಿಯನ್ನು ರಚಿಸಲು ತೀರ್ಮಾನಿಸಿದೆ. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 718 ಹೆಚ್‌ಎಸ್‌ಹೆಚ್ 2008, ಬೆಂಗಳೂರು, ದಿನಾಂಕ: 22ನೇ ಡಿಸೆಂಬರ್ 2008.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿ ಕಾರ್ಯನಿರ್ವಹಿಸುತ್ತಿರುವ ವೈದ್ಯರು/ ದಂತ ಆರೋಗ್ಯಾಧಿಕಾರಿಗಳು/ ತಜ್ಞರುಗಳ ಭತ್ಯೆಗಳನ್ನು ವೈದ್ಯಕೀಯ ಶಿಕ್ಷಣ ಇಲಾಖೆಯ ಬೋಧಕ ವರ್ಗದವರಿಗೆ ನೀಡಲಾಗುತ್ತಿರುವ ಭತ್ಯೆಗಳಿಗೆ ಸಮಾನಾಂತರವಾಗಿ ನೀಡುವ ಬಗ್ಗೆ ಪರಿಶೀಲಿಸಲು ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು ಇವರ ಅಧ್ಯಕ್ಷತೆಯಲ್ಲಿ ಈ ಕೆಳಗಿನಂತೆ ಒಂದು ಸಮಿತಿಯನ್ನು ರಚಿಸಿ ಆದೇಶಿಸಿದೆ.

| | | |
|---|---|---|
| 1) | ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು,<br>ಕರ್ನಾಟಕ ಸರ್ಕಾರ | ಅಧ್ಯಕ್ಷರು |
| 2) | ಪ್ರಧಾನ ಕಾರ್ಯದರ್ಶಿಗಳು,<br>ಆರ್ಥಿಕ ಇಲಾಖೆ | ಸದಸ್ಯರು |
| 3) | ಕಾರ್ಯದರ್ಶಿಗಳು,<br>ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ | ಸದಸ್ಯ<br>ಕಾರ್ಯದರ್ಶಿಗಳು |
| 4) | ಕಾರ್ಯದರ್ಶಿಗಳು,<br>ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ<br>(ವೈದ್ಯಕೀಯ ಶಿಕ್ಷಣ) | ಸದಸ್ಯರು |

5) ಆಯುಕ್ತರು, ಸದಸ್ಯರು
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು

6) ನಿರ್ದೇಶಕರು, ಸದಸ್ಯರು
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು

7) ನಿರ್ದೇಶಕರು, ಸದಸ್ಯರು
ವೈದ್ಯಕೀಯ ಶಿಕ್ಷಣ ಸೇವೆಗಳು

ಮೇಲ್ಕಂಡ ಸಮಿತಿಯು ಈ ಕೆಳಕಂಡ ವಿಷಯಗಳ ಬಗ್ಗೆ ಪರಿಶೀಲಿಸಿ ವರದಿಯನ್ನು ನೀಡುವುದು.

(i) ಸಮಿತಿಯು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ವ್ಯಾಪ್ತಿಯಲ್ಲಿ ಬರುವ ವಿವಿಧ ವೈದ್ಯ ವೃಂದಗಳಿಗೆ ಭತ್ಯೆಗಳನ್ನು ವೈದ್ಯಕೀಯ ಶಿಕ್ಷಣ ಇಲಾಖೆಯ ಬೋಧಕ ಸಿಬ್ಬಂದಿಯು ಪಡೆಯುತ್ತಿರುವ ಭತ್ಯೆಗಳ ಹಿನ್ನೆಲೆಯಲ್ಲಿ ಪರಾಮರ್ಶಿಸುವುದು.

(ii) ಸದರಿ ಭತ್ಯೆಗಳನ್ನು ನೀಡುವ ಅಗತ್ಯತೆಯನ್ನು ತಿಳಿಸುವುದು.

(iii) ಇಲಾಖೆಯ ತಜ್ಞರು ಹಾಗೂ ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ/ ದಂತ ಆರೋಗ್ಯಾಧಿಕಾರಿಗಳಿಗೆ ವಿಶೇಷ ಭತ್ಯೆ / ಗ್ರಾಮೀಣ ಭತ್ಯೆ/ ಸ್ನಾತಕೋತ್ತರ ಪದವಿ ಪಡೆದ ವೈದ್ಯರಿಗೆ ಹೆಚ್ಚುವರಿ ಭತ್ಯೆ ಇತ್ಯಾದಿಗಳನ್ನು ನೀಡುವ ಬಗ್ಗೆ ಪರಿಶೀಲಿಸುವುದು.

(iv) ಈ ರೀತಿ ಭತ್ಯೆಗಳನ್ನು ನೀಡಿದಲ್ಲಿ ನೀಡಬಹುದಾದ ಪ್ರಮಾಣ ಹಾಗೂ ಅದಕ್ಕೆ ತಗಲುವ ವೆಚ್ಚ ಇತ್ಯಾದಿಯನ್ನು ಗಣನೆಗೆ ತೆಗೆದುಕೊಂಡು ಸೂಕ್ತ ಭತ್ಯೆಗಳನ್ನು ನೀಡುವ ಕುರಿತು ಶಿಫಾರಸ್ಸು ಮಾಡಿ ಸರ್ಕಾರಕ್ಕೆ ವರದಿ ಸಲ್ಲಿಸುವುದು.

(v) ವೈದ್ಯಾಧಿಕಾರಿಗಳಿಗೆ ಅವರ ಕಾರ್ಯ ನಿರ್ವಹಣೆಯ ಆಧಾರದ ಮೇಲೆ ಸೂಕ್ತ ಭತ್ಯೆಗಳನ್ನು ನೀಡುವ ಬಗ್ಗೆ ಪರಿಶೀಲಿಸುವುದು.

(vi) ಕೇಂದ್ರ ಮತ್ತು ರಾಜ್ಯ ಸರ್ಕಾರದ ಆರೋಗ್ಯ ಸಂಬಂಧಿ ಯೋಜನೆಗಳ ಅನುಷ್ಠಾನದ ಫಲಿತಾಂಶಗಳ ಆಧಾರದ ಮೇಲೆ ಸೂಕ್ತ ಭತ್ಯೆಗಳನ್ನು ನೀಡುವ ಬಗ್ಗೆ ಪರಿಶೀಲಿಸುವುದು.

(vii) ಸಮಿತಿಯು ಸದರಿ ವಿಷಯದ ಸಂಬಂಧ ಕರ್ನಾಟಕ ರಾಜ್ಯ ಸರ್ಕಾರಿ ವೈದ್ಯಾಧಿಕಾರಿಗಳ ಸಂಘ (ನೋಂ)ದ ಪದಾಧಿಕಾರಿಗಳೊಂದಿಗೆ ಅಗತ್ಯವೆನಿಸಿದಾಗ ಸಮಾಲೋಚಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.284

**ಐ. ಹೇಮನಾಥ್**

ಸರ್ಕಾರದ ಅಧೀನ ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ಸೇವೆಗಳು-1)

## ಸಮಾಜ ಕಲ್ಯಾಣ ಸಚಿವಾಲಯ

### ತಿದ್ದುಪಡಿ

**ಸಂಖ್ಯೆ: ಸಕಇ 43 ಬಿಸಿಎ 2009, ಬೆಂಗಳೂರು, ದಿನಾಂಕ: 3ನೇ ಮಾರ್ಚ್ 2009.**

ರಾಜ್ಯದ ಅಲೆಮಾರಿ ಜನಾಂಗದವರಿಗೆ ಸೌಲಭ್ಯ ಹಾಗೂ ಮೀಸಲಾತಿ ಕಲ್ಪಿಸುವಲ್ಲಿ ನೇಮಕ ಮಾಡಲಾದ ರಾಜ್ಯ ಮತ್ತು ಜಿಲ್ಲಾ ಹಾಗೂ ತಾಲ್ಲುಕು ಮಟ್ಟದ ಸಲಹಾ ಸಮಿತಿ ನೇಮಕ ಮಾಡಲಾಗಿರುವ ಸರ್ಕಾರದ ಆದೇಶ ಸಂಖ್ಯೆ: ಸಕಇ 127 ಬಿಸಿಎ 2005, ದಿನಾಂಕ 5-6-2006ರಲ್ಲಿನ ಕೊನೆಯ ಸಾಲಿನಲ್ಲಿರುವ ಲೆಕ್ಕ ಶೀರ್ಷಿಕೆ "2225-03-001-01" ಎಂಬುದನ್ನು "2225-03-001-0-01" ಎಂಬುದಾಗಿ ತಿದ್ದಿ ಓದಿಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.836

**ಕೆ. ಸುಬ್ಬಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ-II, ಸಮಾಜ ಕಲ್ಯಾಣ ಇಲಾಖೆ

